KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೫ | ಬೆಂಗಳೂರು, ಗುರುವಾರ, ಮಾರ್ಚ್ ೨೫, ೨೦೧೦ (ಚೈತ್ರ ೪, ಶಕ ವರ್ಷ ೧೯೩೨) | ಸಂಚಿಕೆ ೧೨ |
|---|---|---|


## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 72 ರಾಶಾಪ್ರ 2006, ಬೆಂಗಳೂರು, ದಿನಾಂಕ:1ನೇ ಮಾರ್ಚ್, 2010**

The Karnataka Civil Services (Conduct) Rules, 1966 ಇದರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕ್ರಮ. ಸಂಖ್ಯೆ** — **ನಿಯಮಗಳ ಅನುಕ್ರಮಣಿಕೆ**

**ಕರ್ನಾಟಕ ಸರ್ಕಾರ**

**ಮುಖ್ಯ ಸಚಿವಾಲಯ**

**(ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ)**

**ಅಧಿಸೂಚನೆ**

**ಬೆಂಗಳೂರು, ದಿನಾಂಕ 10ನೇ ಮೇ 1966**

**ಜಿಎಸ್‌ಆರ್ 955.–** ಕರ್ನಾಟಕ ರಾಜ್ಯಪಾಲರು ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಮತ್ತು ಈ ಸಂಬಂಧದಲ್ಲಿ ಅವರನ್ನು ಶಕ್ತಗೊಳಿಸುವ ಇತರ ಎಲ್ಲಾ ಅಧಿಕಾರಗಳನ್ನು ಚಲಾಯಿಸಿ, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

## ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966 ಎಂದು ಕರೆಯತಕ್ಕದ್ದು.

(2) ಅವು ಕೂಡಲೇ ಜಾರಿಗೆ ಬರತಕ್ಕದ್ದು.

(3) ಈ ನಿಯಮಗಳಲ್ಲಿ ಅನ್ಯಥಾ ಉಪಬಂಧಿಸಿರುವುದನ್ನು ಉಳಿದು, ಸಿವಿಲ್ ಸೇವೆಗೆ ನೇಮಕಗೊಂಡಿರುವ ಹಾಗೂ ಕರ್ನಾಟಕ ರಾಜ್ಯದ ವ್ಯವಹಾರಗಳಿಗೆ ಸಂಬಂಧಪಟ್ಟಂತೆ ನಿಯುಕ್ತಿಗೊಂಡಿರುವ ಎಲ್ಲಾ ವ್ಯಕ್ತಿಗಳಿಗೆ ಅವು ಅನ್ವಯವಾಗತಕ್ಕದ್ದು:

ಪರಂತು, ಈ ನಿಯಮಗಳಲ್ಲಿರುವುದು ಯಾವುದೂ,–

(ಎ) ಅಖಿಲ ಭಾರತ ಸೇವೆಯ ಸದಸ್ಯನಾಗಿರುವ,

(ಬಿ) ರಾಜ್ಯಪಾಲರು ಯಾವ ಹುದ್ದೆಯ ಸಂಬಂಧದಲ್ಲಿ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಈ ನಿಯಮಗಳು ಅನ್ವಯವಾಗತಕ್ಕದ್ದಲ್ಲ ಎಂದು ಘೋಷಿಸಿರುವರೋ ಆ ಯಾವುದೇ ಹುದ್ದೆಯನ್ನು ಹೊಂದಿರುವ,

(ಸಿ) ಕೈಗಾರಿಕಾ ಸಂಸ್ಥೆಯ ಯಾವ ನೌಕರನಿಗೆ ತತ್ಕಾಲದಲ್ಲಿ ಜಾರಿಯಲ್ಲಿರುವ ಕೈಗಾರಿಕಾ ನಿಯೋಜನೆ (ಸ್ಥಾಯೀ ಆದೇಶಗಳು) ಅಧಿನಿಯಮ, 1946 (ಕೇಂದ್ರ ಅಧಿನಿಯಮ 1946ರ XX) ರ ಉಪಬಂಧಗಳು ಅನ್ವಯವಾಗುತ್ತವೆಯೋ ಆ ಸರ್ಕಾರಿ ಸಂಸ್ಥೆಯಲ್ಲಿ ನೌಕರನಾಗಿರುವ

– ಯಾರೇ ಸರ್ಕಾರಿ ನೌಕರರಿಗೆ ಅನ್ವಯವಾಗತಕ್ಕದ್ದಲ್ಲ:

[1*][ಮತ್ತೂ ಪರಂತು, 9, 14, 16 ಮತ್ತು 23ನೇ ನಿಯಮಗಳು ಪೂರ್ಣಕಾಲಿಕ ಉದ್ಯೋಗದಲ್ಲಿರದ ಸರ್ಕಾರಿ ನೌಕರನಿಗೆ ಅನ್ವಯವಾಗತಕ್ಕದ್ದಲ್ಲ].

1. * ಅಧಿಸೂಚನೆ ಸಂಖ್ಯೆ ಜಿಎಡಿ 4 ಎಸ್‌ಆರ್‌ಸಿ 72 ದಿನಾಂಕ 26ನೇ ಮೇ 1971ರಲ್ಲಿ ಸೇರಿಸಲಾಗಿದೆ.

**2. ಪರಿಭಾಷೆಗಳು.**– ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "**ಸರ್ಕಾರ**" ಎಂದರೆ ಕರ್ನಾಟಕ ಸರ್ಕಾರ;

(ಬಿ) "**ಸರ್ಕಾರಿ ನೌಕರ**" ಎಂದರೆ ಸಿವಿಲ್ ಸೇವೆಗೆ ಅಥವಾ ಕರ್ನಾಟಕ ರಾಜ್ಯದ ವ್ಯವಹಾರಗಳಿಗೆ ಸಂಬಂಧಪಟ್ಟ ಹುದ್ದೆಗೆ ನೇಮಕಗೊಂಡಿರುವ ಯಾರೇ ವ್ಯಕ್ತಿ;

**ವಿವರಣೆ:**– ಯಾವ ಸರ್ಕಾರಿ ನೌಕರನ ಸೇವೆಗಳನ್ನು ಸರ್ಕಾರವು ಕಂಪನಿಗೆ, ನಿಗಮಕ್ಕೆ, ಸಂಸ್ಥೆಗೆ ಅಥವಾ ಸ್ಥಳೀಯ ಪ್ರಾಧಿಕಾರಕ್ಕೆ ನೀಡಲಾಗಿದೆಯೋ ಆ ಸರ್ಕಾರಿ ನೌಕರನನ್ನು ಈ ನಿಯಮಗಳ ಉದ್ದೇಶಕ್ಕಾಗಿ, ಆತನ ಸಂಬಳವನ್ನು ರಾಜ್ಯದ ಸಂಚಿತ ನಿಧಿಯ ಹೊರತಾದ ಇತರ ಮೂಲಗಳಿಂದ ಪಡೆದುಕೊಳ್ಳಲಾಗುತ್ತಿದ್ದರೂ, ಸರ್ಕಾರದ ಅಧೀನದಲ್ಲಿ ಸೇವೆ ಸಲ್ಲಿಸುತ್ತಿರುವ ಸರ್ಕಾರಿ ನೌಕರನೆಂದು ಭಾವಿಸತಕ್ಕದ್ದು;

(ಸಿ) ಸರ್ಕಾರಿ ನೌಕರನಿಗೆ ಸಂಬಂಧಪಟ್ಟಂತೆ "ಕುಟುಂಬದ ಸದಸ್ಯರು" ಎಂಬುದು:–

(i) ಸರ್ಕಾರಿ ನೌಕರನ/ ನೌಕರಳ ಹೆಂಡತಿಯು ಅಥವಾ ಸಂದರ್ಭಾನುಸಾರ ಗಂಡನು, ಸರ್ಕಾರಿ ನೌಕರನ/ನೌಕರಳ ಜೊತೆ ವಾಸವಾಗಿರಲಿ ಅಥವಾ ಇಲ್ಲದಿರಲಿ ಅವರನ್ನು ಒಳಗೊಳ್ಳುತ್ತದೆ. ಆದರೆ ಸಕ್ಷಮ ನ್ಯಾಯಾಲಯದ ಡಿಕ್ರಿಯ ಅಥವಾ ಆದೇಶದ ಮೂಲಕ ಸರ್ಕಾರಿ ನೌಕರನಿಂದ/ ನೌಕರಳಿಂದ ಬೇರ್ಪಟ್ಟಿರುವ ಹೆಂಡತಿಯನ್ನು ಅಥವಾ ಸಂದರ್ಭಾನುಸಾರ ಗಂಡನನ್ನು ಒಳಗೊಳ್ಳುವುದಿಲ್ಲ.

(ii) ಸರ್ಕಾರಿ ನೌಕರನ ಮತ್ತು ಸಂಪೂರ್ಣವಾಗಿ ಆತನ ಮೇಲೆಯೇ ಅವಲಂಬಿಸಿರುವ ಮಗನನ್ನು ಅಥವಾ ಮಗಳನ್ನು ಅಥವಾ ಮಲ–ಮಗ ಅಥವಾ ಮಲ–ಮಗಳನ್ನು ಒಳಗೊಳ್ಳುತ್ತದೆ. ಆದರೆ ಸರ್ಕಾರಿ ನೌಕರನ ಮೇಲೆ ಯಾವುದೇ ರೀತಿಯಲ್ಲಿ ಅವಲಂಬಿಸಿರದ ಅಥವಾ ಯಾವುದೇ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ಯಾವ ಮಗುವಿನ ಅಥವಾ ಮಲ ಮಗುವಿನ ಅಭಿರಕ್ಷೆಯನ್ನು ಸರ್ಕಾರಿ ನೌಕರನಿಗೆ ನೀಡಲಾಗಿಲ್ಲವೋ ಆ ಮಗುವನ್ನು ಅಥವಾ ಮಲ–ಮಗುವನ್ನು ಒಳಗೊಳ್ಳುವುದಿಲ್ಲ;

(iii) ಸರ್ಕಾರಿ ನೌಕರನಿಗೆ ಅಥವಾ ಸರ್ಕಾರಿ ನೌಕರನ/ನೌಕರಳ ಹೆಂಡತಿಗೆ ಅಥವಾ ಗಂಡನಿಗೆ ರಕ್ತ ಸಂಬಂಧದ ಅಥವಾ ವಿವಾಹದ ಮೂಲಕ ಸಂಬಂಧಿಯಾದ ಮತ್ತು ಪೂರ್ಣವಾಗಿ ಸರ್ಕಾರಿ ನೌಕರರನ್ನೇ ಅವಲಂಬಿಸಿರುವ ಯಾರೇ ಇತರ ವ್ಯಕ್ತಿಯನ್ನು ಒಳಗೊಳ್ಳುತ್ತದೆ;

(ಡಿ) "ನಿಯಮಿಸಿದ ಪ್ರಾಧಿಕಾರ" ಎಂದರೆ ರಾಜ್ಯಸರ್ಕಾರವು ಈ ಸಂಬಂಧದಲ್ಲಿ ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಪ್ರಾಧಿಕಾರ.

3. **ಸಾಮಾನ್ಯ.–** (1) ಪ್ರತಿಯೊಬ್ಬ ಸರ್ಕಾರಿ ನೌಕರನು, ಎಲ್ಲ ಕಾಲಗಳಲ್ಲಿಯೂ,–

(i) ಸಂಪೂರ್ಣ ನೀತಿ ನಿಷ್ಠೆಯನ್ನು ಹೊಂದಿರತಕ್ಕದ್ದು,

(ii) ಕರ್ತವ್ಯ ಶ್ರದ್ಧೆಯನ್ನು ಹೊಂದಿರತಕ್ಕದ್ದು; ಮತ್ತು

(iii) ಸರ್ಕಾರಿ ನೌಕರನಿಗೆ ತಕ್ಕದ್ದಲ್ಲದ ಯಾವುದನ್ನೂ ಮಾಡತಕ್ಕದ್ದಲ್ಲ.

(2) (i) ಮೇಲ್ವಿಚಾರಣಾ ಹುದ್ದೆಯನ್ನು ಹೊಂದಿರುವ ಪ್ರತಿಯೊಬ್ಬ ಸರ್ಕಾರಿ ನೌಕರನು, ತತ್ಕಾಲದಲ್ಲಿ ತನ್ನ ನಿಯಂತ್ರಣಕ್ಕೆ ಮತ್ತು ಅಧಿಕಾರಕ್ಕೆ ಒಳಪಟ್ಟಿರುವ ಎಲ್ಲಾ ಸರ್ಕಾರಿ ನೌಕರರ ನೀತಿ ನಿಷ್ಠೆಯನ್ನು ಮತ್ತು ಕರ್ತವ್ಯ ಶ್ರದ್ಧೆಯನ್ನು ಸುನಿಶ್ಚಿತಪಡಿಸಿಕೊಳ್ಳಲು ಸಾಧ್ಯವಿರುವ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

(ii) ಯಾರೇ ಸರ್ಕಾರಿ ನೌಕರನು, ತನ್ನ ಪದೀಯ ಕರ್ತವ್ಯಗಳನ್ನು ನಿರ್ವಹಿಸುವಾಗ ಅಥವಾ ಆತನಿಗೆ ಪ್ರದತ್ತವಾಗಿರುವ ಅಧಿಕಾರಗಳನ್ನು ಚಲಾಯಿಸುವಾಗ, ತನ್ನ ವರಿಷ್ಠಾಧಿಕಾರಿಯ ನಿರ್ದೇಶನದ ಮೇರೆಗೆ ಆತನು ಕಾರ್ಯನಿರ್ವಹಿಸುತ್ತಿರುವ ಸಂದರ್ಭದ ಹೊರತಾಗಿ ತನ್ನ ವಿವೇಚನಾನುಸಾರವಲ್ಲದೆ ಅನ್ಯಥಾ ಕಾರ್ಯನಿರ್ವಹಿಸತಕ್ಕದ್ದಲ್ಲ ಮತ್ತು ಆತನು ಅಂಥ ನಿರ್ದೇಶನದ ಮೇರೆಗೆ ಕಾರ್ಯನಿರ್ವಹಿಸುತ್ತಿರುವಾಗ ಕಾರ್ಯಸಾಧ್ಯವಿರುವಲ್ಲೆಲ್ಲಾ ಲಿಖಿತ ನಿರ್ದೇಶನವನ್ನು ಪಡೆದುಕೊಳ್ಳತಕ್ಕದ್ದು ಮತ್ತು ಲಿಖಿತ ನಿರ್ದೇಶನವನ್ನು ಪಡೆಯಲು ಕಾರ್ಯಸಾಧ್ಯವಿಲ್ಲದಿರುವಾಗ, ಆತನು ಆ ತರುವಾಯ ಸಾಧ್ಯವಾದಷ್ಟು ಬೇಗನೆ ನಿರ್ದೇಶನದ ಬಗ್ಗೆ ಲಿಖಿತದಲ್ಲಿ ಸ್ಥಿರೀಕರಣವನ್ನು ಪಡೆದುಕೊಳ್ಳತಕ್ಕದ್ದು.

**ವಿವರಣೆ.–** (2)ನೇ ಉಪನಿಯಮದ (ii)ನೇ ಖಂಡದಲ್ಲಿ ಇರುವುದು ಯಾವುದೂ ಅಧಿಕಾರಗಳ ಮತ್ತು ಹೊಣೆಗಾರಿಕೆಗಳ ಹಂಚಿಕೆ ಯೋಜನೆಯ ಮೇರೆಗೆ ಸೂಚನೆಗಳನ್ನು ಪಡೆಯುವ ಅಗತ್ಯವಿಲ್ಲದಿರುವಾಗ, ವರಿಷ್ಠ ಅಧಿಕಾರಿಯಿಂದ ಅಥವಾ ಪ್ರಾಧಿಕಾರದಿಂದ ಸೂಚನೆಗಳನ್ನು ಅಥವಾ ಅವರ/ಅದರ ಅನುಮೋದನೆಯನ್ನು ಕೋರುವ ಮೂಲಕ ಸರ್ಕಾರಿ ನೌಕರನು ತನ್ನ ಜವಾಬ್ದಾರಿಗಳಿಂದ ತಪ್ಪಿಸಿಕೊಳ್ಳಲು ಅವನನ್ನು ಶಕ್ತಗೊಳಿಸುತ್ತದೆ ಎಂದು ಅರ್ಥೈಸತಕ್ಕದ್ದಲ್ಲ.

4. ***ಸರ್ಕಾರವು ಪೋಷಿಸಿಕೊಂಡು ಬರುತ್ತಿರುವ ಕಂಪನಿಯಲ್ಲಿ ಅಥವಾ ಫರ್ಮಿನಲ್ಲಿ ಸರ್ಕಾರಿ ನೌಕರನ ಹತ್ತಿರದ ಸಂಬಂಧಿಗೆ ಉದ್ಯೋಗ.–** (1) ಯಾರೇ ಸರ್ಕಾರಿ ನೌಕರನು, ಯಾವುದೇ [1][ಕಂಪನಿಯಲ್ಲಿ ಅಥವಾ ಫರ್ಮ್]ನಲ್ಲಿ ತನ್ನ ಕುಟುಂಬದ ಯಾರೇ ಸದಸ್ಯನಿಗೆ ಉದ್ಯೋಗವನ್ನು ದೊರಕಿಸಿಕೊಡಲು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ತನ್ನ ಸ್ಥಾನವನ್ನು ಅಥವಾ ಪ್ರಭಾವವನ್ನು ಬಳಸಿಕೊಳ್ಳತಕ್ಕದ್ದಲ್ಲ.

*1. ಅಧಿಸೂಚನೆ ಸಂಖ್ಯೆ ಸಿಆಸುಇ 4 ಎಸ್‌ಆರ್‌ಸಿ 76, ದಿನಾಂಕ 2ನೇ ನವೆಂಬರ್ 1976ರ ಮೂಲಕ ಪ್ರತಿಯೋಜಿಸಲಾಗಿದೆ.

(2) (i) ಯಾರೇ Iನೇ ದರ್ಜೆಯ ಅಧಿಕಾರಿಯು, ಸರ್ಕಾರದ ಪೂರ್ವ ಮಂಜೂರಾತಿ ಪಡೆದ ಹೊರತು ತನ್ನ ಮಗನಿಗೆ, ಮಗಳಿಗೆ ಅಥವಾ ಇತರ ಅವಲಂಬಿತರಿಗೆ, ಯಾವ ಕಂಪನಿಯಲ್ಲಿ ಅಥವಾ ಫರ್ಮಿನಲ್ಲಿ ಆತನು ಸರ್ಕಾರಿ ವ್ಯವಹಾರವನ್ನು ಹೊಂದಿರುವನೋ ಆ ಯಾವುದೇ [1][ಕಂಪನಿಯಲ್ಲಿ ಅಥವಾ ಫರ್ಮ್‌ನಲ್ಲಿ] ಅಥವಾ ಸರ್ಕಾರದೊಂದಿಗೆ ಸರ್ಕಾರಿ ವ್ಯವಹಾರಗಳನ್ನು ಹೊಂದಿರುವ ಯಾವುದೇ ಇತರ ಉದ್ಯಮದಲ್ಲಿ ಉದ್ಯೋಗವನ್ನು ಒಪ್ಪಿಕೊಳ್ಳಲು ಅನುಮತಿ ನೀಡತಕ್ಕದ್ದಲ್ಲ:

ಪರಂತು, ಉದ್ಯೋಗವನ್ನು ಒಪ್ಪಿಕೊಳ್ಳಲು ಸರ್ಕಾರದ ಪೂರ್ವಾನುಮತಿ ಪಡೆಯುವುದಕ್ಕಾಗಿ ಕಾಯಲು ಸಾಧ್ಯವಿಲ್ಲದಿರುವಾಗ ಅಥವಾ ಅನ್ಯಥಾ ತುರ್ತು ಎಂದು ಪರಿಗಣಿಸಿರುವಾಗ ಸರ್ಕಾರಕ್ಕೆ ಈ ವಿಷಯದ ಬಗ್ಗೆ ವರದಿ ಮಾಡತಕ್ಕದ್ದು ಮತ್ತು ಸರ್ಕಾರದ ಅನುಮತಿಗೆ ಒಳಪಟ್ಟು, ತಾತ್ಕಾಲಿಕವಾಗಿ ಉದ್ಯೋಗವನ್ನು ಒಪ್ಪಿಕೊಳ್ಳಬಹುದು.

(ii) ಸರ್ಕಾರಿ ನೌಕರನು, ತನ್ನ ಕುಟುಂಬದ ಸದಸ್ಯನು ಯಾವುದೇ ಕಂಪನಿಯಲ್ಲಿ ಅಥವಾ ಫರ್ಮ್‌ನಲ್ಲಿ ಉದ್ಯೋಗವನ್ನು ಒಪ್ಪಿಕೊಂಡಿದ್ದಾನೆ ಎಂಬುದು ತಿಳಿದ ಕೂಡಲೇ, ಹಾಗೆ ಒಪ್ಪಿಕೊಂಡಿರುವುದನ್ನು ನಿಯಮಿಸಿದ ಪ್ರಾಧಿಕಾರಿಗೆ ತಿಳಿಸತಕ್ಕದ್ದು ಮತ್ತು ಆ [1][ಕಂಪನಿಯೊಂದಿಗೆ ಅಥವಾ ಫರ್ಮ್] ನೊಂದಿಗೆ ಆತನು ಯಾವುದೇ ಸರ್ಕಾರಿ ವ್ಯವಹಾರ ಹೊಂದಿರುವನೇ ಅಥವಾ ಹೊಂದಿದ್ದನೇ ಎಂಬುದನ್ನು ಸಹ ತಿಳಿಸತಕ್ಕದ್ದು:

ಪರಂತು, Iನೇ ದರ್ಜೆ ಅಧಿಕಾರಿಯ ಸಂದರ್ಭದಲ್ಲಿ, (i)ನೇ ಖಂಡದ ಅಡಿಯಲ್ಲಿ ಆತನು ಸರ್ಕಾರದ ಮಂಜೂರಾತಿಯನ್ನು ಈಗಾಗಲೇ ಪಡೆದಿದ್ದರೆ, ಅಥವಾ ಸರ್ಕಾರಕ್ಕೆ ವರದಿ ಕಳುಹಿಸಿದ್ದರೆ ಹಾಗೆ ತಿಳಿಸುವ ಅಗತ್ಯವಿರತಕ್ಕದ್ದಲ್ಲ.

(3) ಯಾರೇ ಸರ್ಕಾರಿ ನೌಕರನು, ತನ್ನ ಅಧಿಕೃತ ಕರ್ತವ್ಯಗಳನ್ನು ನಿರ್ವಹಿಸುವಾಗ ಯಾವುದೇ ಕಂಪನಿಯೊಂದಿಗೆ ಅಥವಾ ಫರ್ಮಿನೊಂದಿಗೆ ಅಥವಾ ಯಾರೇ ಇತರ ವ್ಯಕ್ತಿಯೊಂದಿಗೆ ಅಥವಾ ಅವುಗಳಿಗೆ ಆತನ ಕುಟುಂಬದ ಯಾರೇ ಸದಸ್ಯನು ಆ [1][ಕಂಪನಿಯಲ್ಲಿ ಅಥವಾ ಫರ್ಮಿನಲ್ಲಿ] ಅಥವಾ ಆ ವ್ಯಕ್ತಿಯ ಅಧೀನದಲ್ಲಿ ನಿಯೋಜಿತನಾಗಿದ್ದರೆ ಆತನು ಅಥವಾ ಆತನ ಕುಟುಂಬದ ಯಾರೇ ಸದಸ್ಯನು ಅಂಥ ವಿಷಯದಲ್ಲಿ ಅಥವಾ ಕರಾರಿನಲ್ಲಿ

ಯಾವುದೇ ಇತರ ರೀತಿಯಲ್ಲಿ ಹಿತಾಸಕ್ತಿ ಉಳ್ಳವನಾಗಿದ್ದರೆ, ಆ ಯಾವುದೇ ವಿಷಯದ ಬಗ್ಗೆ ವ್ಯವಹರಿಸತಕ್ಕದ್ದಲ್ಲ ಅಥವಾ ಯಾವುದೇ ಕಾಂಟ್ರಾಕ್ಟನ್ನು ನೀಡತಕ್ಕದ್ದಲ್ಲ ಅಥವಾ ಅದನ್ನು ಮಂಜೂರು ಮಾಡತಕ್ಕದ್ದಲ್ಲ ಮತ್ತು ಸರ್ಕಾರಿ ನೌಕರನು ಅಂತಹ ಪ್ರತಿಯೊಂದು ವಿಷಯದ ಅಥವಾ ಕರಾರಿನ ಬಗ್ಗೆ ತನ್ನ ವರಿಷ್ಠ ಅಧಿಕಾರಿಗೆ ತಿಳಿಸತಕ್ಕದ್ದು ಮತ್ತು ಕರಾರಿನ ಬಗೆಗಿನ ಆ ವಿಷಯವನ್ನು, ಯಾವ ಪ್ರಾಧಿಕಾರಿಗೆ ಆ ಬಗ್ಗೆ ತಿಳಿಸಲಾಗಿದೆಯೋ ಆ ಪ್ರಾಧಿಕಾರಿಯ ಸೂಚನೆಗನುಸಾರವಾಗಿ ಆ ತರುವಾಯ ಅದನ್ನು ವಿಲೆ ಮಾಡತಕ್ಕದ್ದು.

1. ಅಧಿಸೂಚನೆ ಸಂ. ಸಿಆಸುಇ 4 ಎಸ್‌ಆರ್‌ಸಿ 26 ದಿನಾಂಕ 2ನೇ ನವೆಂಬರ್ 1976ರ ಮೂಲಕ ಪ್ರತಿಯೋಜಿಸಲಾಗಿದೆ.

**5. ರಾಜಕೀಯದಲ್ಲಿ ಮತ್ತು ಚುನಾವಣೆಯಲ್ಲಿ ಭಾಗವಹಿಸುವುದು.–** (1) ಯಾರೇ ಸರ್ಕಾರಿ ನೌಕರನು, ಯಾವುದೇ ರಾಜಕೀಯ ಪಕ್ಷದ ಅಥವಾ ರಾಜಕಾರಣದಲ್ಲಿ ಭಾಗವಹಿಸುವಂಥ ಯಾವುದೇ ಸಂಘ ಸಂಸ್ಥೆಯ ಸದಸ್ಯನಾಗಿರತಕ್ಕದ್ದಲ್ಲ ಅಥವಾ ಅವುಗಳೊಂದಿಗೆ ಅನ್ಯಥಾ ಸಂಬಂಧ ಹೊಂದಿರತಕ್ಕದ್ದಲ್ಲ ಅಥವಾ ಯಾವುದೇ ರಾಜಕೀಯ ಚಳುವಳಿ ಅಥವಾ ಚಟುವಟಿಕೆಯಲ್ಲಿ ಭಾಗವಹಿಸತಕ್ಕದ್ದಲ್ಲ, ಅದರ ಸಹಾಯಾರ್ಥ ವಂತಿಗೆ ನೀಡತಕ್ಕದ್ದಲ್ಲ ಅಥವಾ ಅದಕ್ಕೆ ಯಾವುದೇ ರೀತಿಯ ನೆರವು ನೀಡತಕ್ಕದ್ದಲ್ಲ.

(2) ಕಾನೂನಿನ ಮೂಲಕ ಸ್ಥಾಪಿತವಾದ ಸರ್ಕಾರವನ್ನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಉರುಳಿಸುವಂಥದ್ದಾಗಿರುವ ಅಥವಾ ಉರುಳಿಸುವ ಉದ್ದೇಶ ಹೊಂದಿರುವ ಯಾವುದೇ ಚಳುವಳಿಯಲ್ಲಿ ಅಥವಾ ಚಟುವಟಿಕೆಯಲ್ಲಿ ಅವನ ಕುಟುಂಬದ ಯಾರೇ ಸದಸ್ಯನೂ ಭಾಗವಹಿಸದಂತೆ, ಅದರ ಸಹಾಯಾರ್ಥ ವಂತಿಗೆ ನೀಡದಂತೆ ಅಥವಾ ಇನ್ನಾವುದೇ ರೀತಿಯಿಂದ ನೆರವಾಗುವುದನ್ನು ತಡೆಗಟ್ಟಲು ಪ್ರಯತ್ನಿಸುವುದು ಪ್ರತಿಯೊಬ್ಬ ಸರ್ಕಾರಿ ನೌಕರನ ಕರ್ತವ್ಯವಾಗಿರತಕ್ಕದ್ದು ಮತ್ತು ಅಂಥ ಯಾವುದೇ ಚಳುವಳಿಯಲ್ಲಿ ಅಥವಾ ಚಟುವಟಿಕೆಯಲ್ಲಿ ಅವನ ಕುಟುಂಬದ ಸದಸ್ಯರು ಭಾಗವಹಿಸುವುದನ್ನು, ವಂತಿಗೆ ನೀಡುವುದನ್ನು ಅಥವಾ ಬೇರೆ ರೀತಿಯಿಂದ ನೆರವು ನೀಡುವುದನ್ನು ತಡೆಗಟ್ಟಲು ಸರ್ಕಾರಿ ನೌಕರನಿಗೆ ಸಾಧ್ಯವಾಗದಿದ್ದರೆ, ಅವನು ಆ ವಿಷಯವನ್ನು ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

(3) ಯಾವುದೇ ಒಂದು ಪಕ್ಷವು ರಾಜಕೀಯ ಪಕ್ಷವೇ ಅಥವಾ ಯಾವುದೇ ಸಂಘಸಂಸ್ಥೆಯು ರಾಜಕೀಯದಲ್ಲಿ ಭಾಗವಹಿಸುತ್ತಿದೆಯೇ ಅಥವಾ ಯಾವುದೇ ಚಳವಳಿಯು ಅಥವಾ ಚಟುವಟಿಕೆಯು (2)ನೇ ಉಪನಿಯಮದ ವ್ಯಾಪ್ತಿಯೊಳಗೆ ಬರುತ್ತದೆಯೇ ಎಂಬ ಯಾವುದೇ ಪ್ರಶ್ನೆ ಉದ್ಭವಿಸಿದಾಗ, ಆ ಕುರಿತು ಸರ್ಕಾರದ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

(4) ಯಾರೇ ಸರ್ಕಾರಿ ನೌಕರನು ಯಾವುದೇ ವಿಧಾನಮಂಡಲದ ಅಥವಾ ಸ್ಥಳೀಯ ಪ್ರಾಧಿಕಾರದ ಚುನಾವಣಾ ಪ್ರಚಾರ ಮಾಡತಕ್ಕದ್ದಲ್ಲ ಅಥವಾ ಅನ್ಯಥಾ ಹಸ್ತಕ್ಷೇಪ ಮಾಡತಕ್ಕದ್ದಲ್ಲ ಅಥವಾ ಆ ಸಂಬಂಧದಲ್ಲಿ ತನ್ನ ಪ್ರಭಾವವನ್ನು ಬೀರತಕ್ಕದ್ದಲ್ಲ ಅಥವಾ ಅದರಲ್ಲಿ ಭಾಗವಹಿಸತಕ್ಕದ್ದಲ್ಲ:

ಪರಂತು,–

(i) ಅಂಥ ಚುನಾವಣೆಯಲ್ಲಿ ತನ್ನ ಮತವನ್ನು ಚಲಾಯಿಸಲು ಅರ್ಹನಾಗಿರುವ ಸರ್ಕಾರಿ ನೌಕರನು ಮತ ಹಾಕಲು ತನಗಿರುವ ಹಕ್ಕನ್ನು ಚಲಾಯಿಸಬಹುದು, ಆದರೆ ಆತನು ಹಾಗೆ ಮಾಡುವಾಗ, ತಾನು ಮತ ಹಾಕಲು ಉದ್ದೇಶಿಸಿರುವ ರೀತಿ ಅಥವಾ ಮತ ಹಾಕಿದ ರೀತಿಯ ಬಗ್ಗೆ ಯಾವುದೇ ಸೂಚನೆಯನ್ನು ನೀಡತಕ್ಕದ್ದಲ್ಲ.

(ii) ಚುನಾವಣೆ ನಡೆಯುವಾಗ, ಸರ್ಕಾರಿ ನೌಕರನು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ಅಥವಾ ಕಾನೂನಿನ ಮೇರೆಗೆ, ಆತನ ಮೇಲೆ ವಿಧಿಸಲಾಗಿರುವ ಕರ್ತವ್ಯದ ಯುಕ್ತ ನಿರ್ವಹಣೆಯಲ್ಲಿ, ಆತನು ನೆರವು ನೀಡುತ್ತಾನೆಂಬ ಏಕೈಕ ಕಾರಣಕ್ಕಾಗಿ ಈ ಉಪನಿಯಮದ ಉಪಬಂಧಗಳನ್ನು ಉಲ್ಲಂಘಿಸಿರುವನೆಂದು ಭಾವಿಸತಕ್ಕದ್ದಲ್ಲ.

**ವಿವರಣೆ:–** ಸರ್ಕಾರಿ ನೌಕರನು ಯಾವುದೇ ಚುನಾವಣಾ ಚಿಹ್ನೆಯನ್ನು ತನ್ನ ಶರೀರದ, ವಾಹನದ ಅಥವಾ ನಿವಾಸದ ಮೇಲೆ ಪ್ರದರ್ಶಿಸಿದರೆ, ಅವನು, ಈ ಉಪ–ನಿಯಮದ ಅರ್ಥವ್ಯಾಪ್ತಿಯೊಳಗೆ ಚುನಾವಣೆಗೆ ಸಂಬಂಧಿಸಿದಂತೆ ತನ್ನ ಪ್ರಭಾವವನ್ನು ಬೀರುತ್ತಿದ್ದಾನೆ ಎಂದು ಪರಿಗಣಿಸತಕ್ಕದ್ದು.

**6. ಸರ್ಕಾರಿ ನೌಕರನು ಸಂಘ ಸಂಸ್ಥೆಗೆ ಸೇರಿಕೊಳ್ಳುವುದು.–** ಯಾರೇ ಸರ್ಕಾರಿ ನೌಕರನು, ಯಾವ ಸಂಘ ಸಂಸ್ಥೆಯ ಉದ್ದೇಶಗಳು ಅಥವಾ ಚಟುವಟಿಕೆಗಳು ಭಾರತದ ಸಾರ್ವಭೌಮತ್ವದ ಮತ್ತು ಅಖಂಡತೆಯ ಅಥವಾ ಸಾರ್ವಜನಿಕ ಸುವ್ಯವಸ್ಥೆಯ ಅಥವಾ ನೈತಿಕತೆಯ ಹಿತಾಸಕ್ತಿಗೆ ಧಕ್ಕೆಯುಂಟು ಮಾಡುವವೋ ಆ ಸಂಘ ಸಂಸ್ಥೆಗೆ ಸೇರಿಕೊಳ್ಳತಕ್ಕದ್ದಲ್ಲ ಅಥವಾ ಅದರ ಸದಸ್ಯನಾಗಿ ಮುಂದುವರಿಯತಕ್ಕದ್ದಲ್ಲ.

7. [1][xxx]

1. ಅಧಿಸೂಚನೆ ಸಂಖ್ಯೆ ಜಿಎಡಿ 43 ಎಸ್‌ಎಸ್‌ಆರ್ 67, ದಿನಾಂಕ 4ನೇ ಏಪ್ರಿಲ್ 1968ರ ಮೂಲಕ ಬಿಟ್ಟುಬಿಡಲಾಗಿದೆ.

**8. ಪ್ರದರ್ಶನ ಮತ್ತು ಮುಷ್ಕರಗಳು.–** ಯಾರೇ ಸರ್ಕಾರಿ ನೌಕರನು,–

(i) ಭಾರತದ ಸಾರ್ವಭೌಮತ್ವ ಮತ್ತು ಅಖಂಡತೆಯ, ದೇಶದ ಭದ್ರತೆಯ, ವಿದೇಶಿ ರಾಷ್ಟ್ರಗಳೊಂದಿಗಿನ ಸ್ನೇಹಯುತ ಸಂಬಂಧದ ಹಿತದೃಷ್ಟಿಗೆ, ಸಾರ್ವಜನಿಕ ಸುವ್ಯವಸ್ಥೆಗೆ, ಸಭ್ಯತೆಗೆ ಅಥವಾ ನೈತಿಕತೆಗೆ ಧಕ್ಕೆಯುಂಟು ಮಾಡುವ ಅಥವಾ ನ್ಯಾಯಾಲಯ ನಿಂದನೆಗೆ, ಮಾನಹಾನಿಗೆ ಅಥವಾ ಅಪರಾಧಕ್ಕೆ ಪ್ರಚೋದನೆ ನೀಡುವುದನ್ನು ಒಳಗೊಂಡಿರುವ ಯಾವುದೇ ಪ್ರದರ್ಶನದಲ್ಲಿ ತನ್ನನ್ನು ತೊಡಗಿಸಿಕೊಳ್ಳತಕ್ಕದ್ದಲ್ಲ ಅಥವಾ ಭಾಗವಹಿಸತಕ್ಕದ್ದಲ್ಲ.

[2][ii] ಎಷ್ಟೇ ಸಂಖ್ಯೆಯ ಸರ್ಕಾರಿ ನೌಕರರೊಡನೆ ಸೇರಿ ಯಾವುದೇ ಬಗೆಯ ಮುಷ್ಕರಕ್ಕೆ ತೊಡಗತಕ್ಕದ್ದಲ್ಲ ಅಥವಾ ಯಾವುದೇ ರೀತಿಯಲ್ಲಿ ಅದಕ್ಕೆ ಪ್ರೇರೇಪಣೆ ಮಾಡತಕ್ಕದ್ದಲ್ಲ. ಪ್ರಚೋದನೆ ಮಾಡತಕ್ಕದ್ದಲ್ಲ ಅಥವಾ ದುಷ್ಪ್ರೇರಣೆ ಮಾಡತಕ್ಕದ್ದಲ್ಲ][2].

2. ಅಧಿಸೂಚನೆ ಸಂಖ್ಯೆ ಜಿಎಡಿ 96 ಎಸ್‌ಎಸ್‌ಆರ್ 66, ದಿನಾಂಕ 15ನೇ ಸೆಪ್ಟೆಂಬರ್ 1966ರ ಮೂಲಕ ಸೇರಿಸಲಾಗಿದೆ.

[3][**ವಿವರಣೆ.–**ಈ ನಿಯಮದ ಉದ್ದೇಶಗಳಿಗಾಗಿ "ಮುಷ್ಕರ" ಎಂದರೆ (ಕರ್ತವ್ಯದಿಂದ ಅನಧಿಕೃತ ಗೈರುಹಾಜರಾಗುವುದೂ ಸೇರಿದಂತೆ) ಸರ್ಕಾರಿ ನೌಕರರ ಒಂದು ಗುಂಪು ಒಟ್ಟಾಗಿ ಸೇರಿಕೊಂಡು ಕೆಲಸ ಮಾಡುವುದನ್ನು ನಿಲ್ಲಿಸುವುದು ಅಥವಾ ಎಷ್ಟೇ ಸಂಖ್ಯೆಯ ಸರ್ಕಾರಿ ನೌಕರರು ಒಟ್ಟಾಗಿ ಸೇರಿ ಅಥವಾ ತಮ್ಮ ತಮ್ಮಲ್ಲೇ ಮಾತನಾಡಿಕೊಂಡು ಕೆಲಸ ಮಾಡಲು ನಿರಾಕರಿಸುವುದು ಎಂದು ಅರ್ಥ].

3. ಅಧಿಸೂಚನೆ ಸಂಖ್ಯೆ ಜಿಎಡಿ 96 ಎಸ್‌ಎಸ್‌ಆರ್ 66, ದಿನಾಂಕ 15ನೇ ಸೆಪ್ಟೆಂಬರ್ 1966ರ ಮೂಲಕ ಪ್ರತಿನಿಯೋಜಿಸಲಾಗಿದೆ.

**9. ಪತ್ರಿಕೆ ಅಥವಾ ಆಕಾಶವಾಣಿ ಜೊತೆ ಸಂಬಂಧ.–** (i) ಯಾರೇ ಸರ್ಕಾರಿ ನೌಕರನು, ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆದ ಹೊರತು, ಯಾವುದೇ ವೃತ್ತ ಪತ್ರಿಕೆ ಅಥವಾ ಇತರ ನಿಯತಕಾಲಿಕ ಪ್ರಕಟಣೆಯ ಪೂರ್ಣ ಅಥವಾ ಭಾಗಶಃ ಒಡೆತನವನ್ನು ಹೊಂದಿರತಕ್ಕದ್ದಲ್ಲ ಅಥವಾ ಅವುಗಳ ಸಂಪಾದನಾ ಕಾರ್ಯ ಅಥವಾ ವ್ಯವಸ್ಥಾಪನಾ ಕಾರ್ಯಮಾಡತಕ್ಕದ್ದಲ್ಲ ಅಥವಾ ಅವುಗಳಲ್ಲಿ ಭಾಗವಹಿಸತಕ್ಕದ್ದಲ್ಲ.

[1][(ii) ಯಾರೇ ಸರ್ಕಾರಿ ನೌಕರನು, ಸರ್ಕಾರದ ಅಥವಾ ನಿಯಮಿಸಲಾದ ಪ್ರಾಧಿಕಾರದ ಪೂರ್ವಾನುಮತಿಯನ್ನು ಪಡೆದ ಹೊರತು ಅಥವಾ ತನ್ನ ಕರ್ತವ್ಯಗಳ ಪ್ರಾಮಾಣಿಕ ನಿರ್ವಹಣೆಯ ಸಂದರ್ಭದಲ್ಲಿ ಹೊರತು,–

(ಎ) ಪುಸ್ತಕವನ್ನು ತಾನೇ ಅಥವಾ ಪ್ರಕಾಶಕರ ಮೂಲಕ ಪ್ರಕಟಿಸತಕ್ಕದ್ದಲ್ಲ ಅಥವಾ ಪುಸ್ತಕಕ್ಕೆ ಅಥವಾ ಲೇಖನಗಳ ಸಂಕಲನಕ್ಕೆ ಲೇಖನವನ್ನು ಬರೆದುಕೊಡತಕ್ಕದ್ದಲ್ಲ;

(ಬಿ) ಆಕಾಶವಾಣಿ ಪ್ರಸಾರದಲ್ಲಿ ಭಾಗವಹಿಸತಕ್ಕದ್ದಲ್ಲ ಅಥವಾ ಯಾವುದೇ ವೃತ್ತ ಪತ್ರಿಕೆಗೆ ಅಥವಾ ನಿಯತಕಾಲಿಕೆಗೆ ತನ್ನ ಹೆಸರಿನಲ್ಲಾಗಲೀ ಅಥವಾ ಅನಾಮಧೇಯವಾಗಿಯಾಗಲೀ ಅಥವಾ ಗುಪ್ತನಾಮದಿಂದಾಗಲೀ ಅಥವಾ ಬೇರೊಬ್ಬ ವ್ಯಕ್ತಿಯ ಹೆಸರಿನಲ್ಲಾಗಲೀ ಲೇಖನವನ್ನು ಬರೆಯತಕ್ಕದ್ದಲ್ಲ ಅಥವಾ ಪತ್ರವನ್ನು ಬರೆಯತಕ್ಕದ್ದಲ್ಲ:

ಪರಂತು,–

(i) ಅಂಥ ಪ್ರಕಟಣೆಯು ಪ್ರಕಾಶಕರ ಮೂಲಕ ಆಗಿದ್ದರೆ, ಮತ್ತು ಅದು ಸಂಪೂರ್ಣವಾಗಿ ಸಾಹಿತ್ಯಕ, ಕಲಾತ್ಮಕ ಅಥವಾ ವೈಜ್ಞಾನಿಕ ಸ್ವರೂಪದ್ದಾಗಿದ್ದರೆ; ಅಥವಾ

(ii) ಅಂಥ ಲೇಖನವು ಅಥವಾ ಪ್ರಸಾರವು ಅಥವಾ ಬರವಣಿಗೆಯು ಸಂಪೂರ್ಣವಾಗಿ ಸಾಹಿತ್ಯಕ, ಕಲಾತ್ಮಕ ಅಥವಾ ವೈಜ್ಞಾನಿಕ ಸ್ವರೂಪದ್ದಾಗಿದ್ದರೆ

– ಅಂಥ ಯಾವುದೇ ಅನುಮತಿಯು ಅಗತ್ಯವಿರತಕ್ಕದ್ದಲ್ಲ][1].

1. ಅಧಿಸೂಚನೆ ಸಂಖ್ಯೆ ಜಿಎಡಿ 34 ಎಸ್‌ಎಸ್‌ಆರ್ 68, ದಿನಾಂಕ 19ನೇ ಆಗಸ್ಟ್ 1968ರ ಮೂಲಕ ಪ್ರತಿಯೋಜಿಸಲಾಗಿದೆ.

**10. ಸರ್ಕಾರವನ್ನು ಟೀಕಿಸುವುದು.–** ಯಾರೇ ಸರ್ಕಾರಿ ನೌಕರನು, ಆಕಾಶವಾಣಿ ಪ್ರಸಾರದಲ್ಲಾಗಲಿ ಅಥವಾ ಅವನ ಹೆಸರಿನಲ್ಲಿ ಅಥವಾ ಅನಾಮಧೇಯವಾಗಿ, ಗುಪ್ತನಾಮದಲ್ಲಿ ಅಥವಾ ಬೇರೊಬ್ಬನ ಹೆಸರಿನಲ್ಲಿ ಪ್ರಕಟಿಸಲಾದ ಇತರ ಯಾವುದೇ ದಸ್ತಾವೇಜಿನಲ್ಲಿ ಅಥವಾ ಪತ್ರಿಕೆಗೆ ಬರೆದ ಯಾವುದೇ ಪತ್ರದಲ್ಲಿ ಅಥವಾ ಯಾವುದೇ ಸಾರ್ವಜನಿಕ ಹೇಳಿಕೆಯಲ್ಲಿ,–

(i) ಕರ್ನಾಟಕ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಅಥವಾ ಯಾವುದೇ ಇತರ ರಾಜ್ಯ ಸರ್ಕಾರದ ಪ್ರಸ್ತುತ ಅಥವಾ ಇತ್ತೀಚಿನ ಯಾವುದೇ ನೀತಿಯ ಅಥವಾ ಕ್ರಮದ ಬಗ್ಗೆ ಪ್ರತಿಕೂಲ ಟೀಕೆಯ ಪರಿಣಾಮ ಹೊಂದಿರುವಂಥ:

[1][ಪರಂತು, ಈ ಖಂಡದಲ್ಲಿ ಒಳಗೊಂಡಿರುವುದು ಯಾವುದೂ, ಸರ್ಕಾರಿ ನೌಕರನು, ಸರ್ಕಾರಿ ನೌಕರರ ಕಾರ್ಮಿಕ ಸಂಘದ ಅಥವಾ ಸಂಘದ ಪದಾಧಿಕಾರಿಯಾಗಿ ಅಂಥ ಸರ್ಕಾರಿ ನೌಕರರ ಸೇವಾ ಸ್ಥಿತಿಗತಿ ರಕ್ಷಿಸುವ ಅಥವಾ ಅವುಗಳಲ್ಲಿ

ಸುಧಾರಣೆಯನ್ನು ಸುನಿಶ್ಚಿತಗೊಳಿಸುವ ಉದ್ದೇಶಗಳಿಗಾಗಿ ವ್ಯಕ್ತಪಡಿಸಿದ ಪ್ರಾಮಾಣಿಕ ಅಭಿಪ್ರಾಯಗಳಿಗೆ ಅನ್ವಯಿಸತಕ್ಕದ್ದಲ್ಲ; ಅಥವಾ][1]

1. ಅಧಿಸೂಚನೆ ಸಂಖ್ಯೆ ಜಿಎಡಿ 6 ಎಸ್‌ಎಸ್‌ಆರ್ 73, ದಿನಾಂಕ 9ನೇ ಅಕ್ಟೋಬರ್ 1973 (ಕೆಜಿಡಿ 23 ಅಕ್ಟೋಬರ್ 1973)ರ ಮೂಲಕ ಪ್ರತಿಯೋಜಿಸಲಾಗಿದೆ.

(ii) ಕರ್ನಾಟಕ ಸರ್ಕಾರದ ಮತ್ತು ಕೇಂದ್ರ ಸರ್ಕಾರದ ಅಥವಾ ಇತರ ಯಾವುದೇ ರಾಜ್ಯ ಸರ್ಕಾರದ ನಡುವಿನ ಸಂಬಂಧಗಳನ್ನು ಇಕ್ಕಟ್ಟಿಗೆ ಸಿಲುಕಿಸುವಂಥ; ಅಥವಾ

(iii) ಕೇಂದ್ರ ಸರ್ಕಾರದ ಮತ್ತು ಯಾವುದೇ ವಿದೇಶಿ ಸರ್ಕಾರದ ನಡುವಿನ ಸಂಬಂಧಗಳನ್ನು ಇಕ್ಕಟ್ಟಿಗೆ ಸಿಲುಕಿಸುವಂಥ ಸಂಗತಿಗಳ ನಿರೂಪಣೆ ಮಾಡತಕ್ಕದ್ದಲ್ಲ ಅಥವಾ ಅಭಿಪ್ರಾಯ ವ್ಯಕ್ತಪಡಿಸತಕ್ಕದ್ದಲ್ಲ

– ಯಾವುದೇ ಸಂಗತಿಯ ನಿರೂಪಣೆ ಮಾಡತಕ್ಕದ್ದಲ್ಲ ಅಥವಾ ಅಭಿಪ್ರಾಯ ವ್ಯಕ್ತಪಡಿಸತಕ್ಕದ್ದಲ್ಲ:

ಪರಂತು, ಈ ನಿಯಮದಲ್ಲಿರುವುದು ಯಾವುದೂ, ಸರ್ಕಾರಿ ನೌಕರನು, ತನ್ನ ಪದೀಯ ಸಾಮರ್ಥ್ಯದಲ್ಲಿ ಅಥವಾ ತನಗೆ ವಹಿಸಲಾಗಿರುವ ಕರ್ತವ್ಯವನ್ನು ವಿಧ್ಯುಕ್ತವಾಗಿ ನಿರ್ವಹಿಸುವಾಗ ನೀಡಿದ ಯಾವುದೇ ಹೇಳಿಕೆಗೆ ಅಥವಾ ವ್ಯಕ್ತಪಡಿಸಿದ ಅಭಿಪ್ರಾಯಗಳಿಗೆ ಅನ್ವಯವಾಗತಕ್ಕದ್ದಲ್ಲ.

**11. ಸಮಿತಿ ಅಥವಾ ಇತರ ಯಾವುದೇ ಪ್ರಾಧಿಕಾರದ ಮುಂದೆ ಸಾಕ್ಷ್ಯ ನೀಡುವುದು.**– (1) (3)ನೇ ಉಪನಿಯಮದಲ್ಲಿ ಉಪಬಂಧಿಸಿರುವುದನ್ನು ಉಳಿದು, ಯಾರೇ ಸರ್ಕಾರಿ ನೌಕರರು, ಸರ್ಕಾರದಿಂದ ಪೂರ್ವ ಮಂಜೂರಾತಿ ಪಡೆದ ಹೊರತು, ಯಾರೇ ವ್ಯಕ್ತಿಯು, ಸಮಿತಿಯು ಅಥವಾ ಪ್ರಾಧಿಕಾರವು ಮಾಡುವ ಯಾವುದೇ ವಿಚಾರಣೆಯ ಸಂಬಂಧದಲ್ಲಿ ಸಾಕ್ಷ್ಯ ನೀಡತಕ್ಕದಲ್ಲ.

(2) (1)ನೇ ಉಪನಿಯಮದ ಮೇರೆಗೆ ಯಾವುದೇ ಮಂಜೂರಾತಿ ನೀಡಿರುವಾಗ, ಅಂಥ ಸಾಕ್ಷ್ಯವನ್ನು ನೀಡುವ ಯಾರೇ ಸರ್ಕಾರಿ ನೌಕರನು ಕರ್ನಾಟಕ ಸರ್ಕಾರದ, ಕೇಂದ್ರ ಸರ್ಕಾರದ ಅಥವಾ ಯಾವುದೇ ಇತರ ರಾಜ್ಯ ಸರ್ಕಾರದ ನೀತಿಯನ್ನು ಅಥವಾ ಕ್ರಮವನ್ನು ಟೀಕಿಸತಕ್ಕದ್ದಲ್ಲ.

(3) ಈ ನಿಯಮದಲ್ಲಿರುವುದು ಯಾವುದೂ,–

(ಎ) ಕರ್ನಾಟಕ ಸರ್ಕಾರವು, ಕೇಂದ್ರ ಸರ್ಕಾರವು, ಸಂಸತ್ತು ಅಥವಾ ರಾಜ್ಯ ವಿಧಾನಮಂಡಲವು ನೇಮಕ ಮಾಡಿದ ಪ್ರಾಧಿಕಾರದ ಮುಂದೆ ವಿಚಾರಣೆಯಲ್ಲಿ ನೀಡಿದ ಸಾಕ್ಷ್ಯಕ್ಕೆ; ಅಥವಾ

(ಬಿ) ಯಾವುದೇ ನ್ಯಾಯಿಕ ವಿಚಾರಣೆಯಲ್ಲಿ ನೀಡಿದ ಸಾಕ್ಷ್ಯಕ್ಕೆ; ಅಥವಾ

(ಸಿ) ಕರ್ನಾಟಕ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಅಥವಾ ಯಾವುದೇ ಇತರ ರಾಜ್ಯ ಸರ್ಕಾರದ ಅಧೀನದಲ್ಲಿರುವ ಪ್ರಾಧಿಕಾರವು ಆದೇಶ ಮಾಡಿರುವ ಇಲಾಖಾ ವಿಚಾರಣೆಯಲ್ಲಿ ನೀಡಿದ ಸಾಕ್ಷ್ಯಕ್ಕೆ

– ಅನ್ವಯವಾಗತಕ್ಕದ್ದಲ್ಲ.

**12. ಮಾಹಿತಿಯನ್ನು ಅನಧಿಕೃತವಾಗಿ ನೀಡಬಾರದು.**– ಯಾರೇ ಸರ್ಕಾರಿ ನೌಕರನು, ಸರ್ಕಾರದ ಯಾವುದೇ ಸಾಮಾನ್ಯ ಅಥವಾ ವಿಶೇಷ ಆದೇಶಕ್ಕೆ ಅನುಸಾರವಾಗಿ ಅಥವಾ ಆತನಿಗೆ ವಹಿಸಲಾಗಿರುವ ಕರ್ತವ್ಯಗಳ ಪ್ರಾಮಾಣಿಕ ನಿರ್ವಹಣೆಯ ಹೊರತು, ಯಾವುದೇ ಸರ್ಕಾರಿ ದಸ್ತಾವೇಜನ್ನು ಅಥವಾ ಅದರ ಯಾವುದೇ ಭಾಗವನ್ನು ಅಥವಾ ಮಾಹಿತಿಯನ್ನು ಯಾರೇ ಸರ್ಕಾರಿ ನೌಕರನಿಗೆ ಅಥವಾ ಅಂಥ ದಸ್ತಾವೇಜನ್ನು ಅಥವಾ ಮಾಹಿತಿಯನ್ನು ಯಾವ ವ್ಯಕ್ತಿಗೆ ನೀಡಲು ಆತನಿಗೆ ಅಧಿಕಾರ ನೀಡಿಲ್ಲವೋ ಆ ಯಾರೇ ಇತರ ವ್ಯಕ್ತಿಗೆ ಪ್ರತ್ಯಕ್ಷವಾಗಿಯಾಗಲೀ ಅಥವಾ ಪರೋಕ್ಷವಾಗಿಯಾಗಲೀ ನೀಡತಕ್ಕದ್ದಲ್ಲ.

**ವಿವರಣೆ:**– ಸರ್ಕಾರಿ ನೌಕರನು, (ಕಚೇರಿ ಮುಖ್ಯಸ್ಥರಿಗೆ ಅಥವಾ ಇಲಾಖಾ ಮುಖ್ಯಸ್ಥರಿಗೆ ಅಥವಾ ರಾಜ್ಯಪಾಲರಿಗೆ ನೀಡುವ ತನ್ನ ಮನವಿಯಲ್ಲಿ) ಯಾವುದನ್ನು ನೋಡಲು ಅವನಿಗೆ ಅಧಿಕಾರ ನೀಡಿಲ್ಲವೋ ಅಥವಾ ತನ್ನ ವೈಯಕ್ತಿಕ ಅಭಿರಕ್ಷೆಯಲ್ಲಿ ಅಥವಾ ವೈಯಕ್ತಿಕ ಉದ್ದೇಶಗಳಿಗಾಗಿ ಇಟ್ಟುಕೊಳ್ಳಲು ಅವನಿಗೆ ಅಧಿಕಾರ ನೀಡಿಲ್ಲವೋ ಆ ಯಾವುದೇ ಪತ್ರವನ್ನು ಅಥವಾ ಸುತ್ತೋಲೆಯನ್ನು ಅಥವಾ ಕಚೇರಿ ಜ್ಞಾಪನವನ್ನು ಉದ್ಧರಿಸಿದರೆ ಅಥವಾ ಯಾವುದೇ ಪತ್ರದಿಂದ, ಸುತ್ತೋಲೆಯಿಂದ ಅಥವಾ ಕಚೇರಿ ಜ್ಞಾಪನದಿಂದ ಅಥವಾ ಯಾವುದೇ ಕಡತದಲ್ಲಿರುವ ಟಿಪ್ಪಣಿಗಳಿಂದ ಉದ್ಧರಿಸಿದರೆ, ಅದು ಈ ಅಧಿನಿಯಮದ ಅರ್ಥವ್ಯಾಪ್ತಿಯೊಳಗೆ ಮಾಹಿತಿಯ ಅನಧಿಕೃತ ನೀಡಿಕೆ ಎನಿಸಿಕೊಳ್ಳತಕ್ಕದ್ದು.

**13. ವಂತಿಗೆ.**– ಯಾರೇ ಸರ್ಕಾರಿ ನೌಕರನು ಸರ್ಕಾರದ ಅಥವಾ ನಿಯಮಿಸಿದ ಪ್ರಾಧಿಕಾರದ ಪೂರ್ವ ಮಂಜೂರಾತಿಯ ಹೊರತು ಯಾವುದೇ ಬಗೆಯ ಉದ್ದೇಶಕ್ಕಾಗಿ ನಗದಾಗಿ ಅಥವಾ ವಸ್ತುಗಳ ರೂಪದಲ್ಲಿ ಯಾವುವೇ

ನಿಧಿಗಳಿಗೆ ಅಥವಾ ಇತರೆ ಸಂಗ್ರಹಣೆಗಳಿಗೆ ವಂತಿಗೆಗಳನ್ನು ಕೇಳತಕ್ಕದ್ದಲ್ಲ ಅಥವಾ ಸ್ವೀಕರಿಸತಕ್ಕದ್ದಲ್ಲ ಅಥವಾ ಯಾವುವೇ ನಿಧಿಗಳನ್ನು ಎತ್ತುವಲ್ಲಿ ಅಥವಾ ಇತರ ಸಂಗ್ರಹಣೆಗಳನ್ನು ಮಾಡುವಲ್ಲಿ ಅನ್ಯಥಾ ಸ್ವತಃ ಸಂಬಂಧ ಹೊಂದಿರತಕ್ಕದ್ದಲ್ಲ.

**14. ದಾನಗಳು.–** (1) ಈ ನಿಯಮಗಳಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು, ಯಾರೇ ಸರ್ಕಾರಿ ನೌಕರನು, ಯಾವುದೇ ರೀತಿಯ ದಾನವನ್ನು ಸ್ವೀಕರಿಸತಕ್ಕದ್ದಲ್ಲ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನು ಅಥವಾ [1][ಅವನ ಪರವಾಗಿ ಕಾರ್ಯನಿರ್ವಹಿಸುತ್ತಿರುವ ಇತರ ಯಾರೇ ವ್ಯಕ್ತಿಯು][1] ಯಾವುದೇ ದಾನವನ್ನು ಸ್ವೀಕರಿಸಲು ಅನುಮತಿಸತಕ್ಕದ್ದಲ್ಲ.

1. ಅಧಿಸೂಚನೆ ಸಂಖ್ಯೆ ಡಿಪಿಎಆರ್ 4 ಎಸ್‌ಆರ್‌ಸಿ 76 ದಿನಾಂಕ 2ನೇ ನವೆಂಬರ್ 1976 (ಕೆಜಿಡಿ 18ನೇ ನವೆಂಬರ್ 1976)ರ ಮೂಲಕ ಪ್ರತಿಯೋಜಿಸಲಾಗಿದೆ.

**ವಿವರಣೆ:–** "ದಾನ" ಎಂಬ ಅಭಿವ್ಯಕ್ತಿಯು, ಸರ್ಕಾರಿ ನೌಕರನೊಡನೆ ಯಾವುದೇ ರೀತಿಯ ಅಧಿಕೃತ ವ್ಯವಹಾರ ಹೊಂದಿರದ ಹತ್ತಿರದ ಸಂಬಂಧಿಯನ್ನು ಅಥವಾ ಆಪ್ತ ಸ್ನೇಹಿತನನ್ನು ಹೊರತುಪಡಿಸಿ ಯಾರೇ ವ್ಯಕ್ತಿಯು ಒದಗಿಸಿದ ಉಚಿತ ಸಾರಿಗೆ, ಊಟ, ವಸತಿ ಅಥವಾ ಇತರ ಸೇವೆ ಅಥವಾ ಯಾವುದೇ ಇತರ ಹಣಕಾಸಿನ ಅನುಕೂಲಗಳನ್ನು ಒಳಗೊಳ್ಳುತ್ತದೆ.

**ಟಿಪ್ಪಣಿ I:** ಸಾಂದರ್ಭಿಕವಾಗಿ ನೀಡುವ ಊಟ, ವಾಹನದಲ್ಲಿ ಕರೆದೊಯ್ಯುವುದು ಅಥವಾ ಇನ್ನಿತರ ಸ್ಥಳೀಯ ಆದರಾತಿಥ್ಯವನ್ನು ದಾನವೆಂದು ಭಾವಿಸತಕ್ಕದ್ದಲ್ಲ.

**ಟಿಪ್ಪಣಿ II:** ಸರ್ಕಾರಿ ನೌಕರನು, ತನ್ನ ಜೊತೆ ಅಧಿಕೃತ ವ್ಯವಹಾರವನ್ನು ಹೊಂದಿರುವ ವ್ಯಕ್ತಿಯಿಂದಾಗಲಿ ಅಥವಾ ಕೈಗಾರಿಕೆಯ ಅಥವಾ ವಾಣಿಜ್ಯ ಫರ್ಮಿನಿಂದಾಗಲಿ ಅಥವಾ ಸಂಸ್ಥೆಗಳಿಂದಾಗಲಿ ವೈಭವದ ಆತಿಥ್ಯವನ್ನು ಅಥವಾ ಪದೇಪದೇ ಆತಿಥ್ಯ ಸ್ವೀಕರಿಸುವುದನ್ನು ತಪ್ಪಿಸಿಕೊಳ್ಳತಕ್ಕದ್ದು.

(2) ವಿವಾಹಗಳು, ವಾರ್ಷಿಕೋತ್ಸವಗಳು, ಉತ್ತರಕ್ರಿಯೆಗಳು ಅಥವಾ ಧಾರ್ಮಿಕ ಸಮಾರಂಭಗಳಂಥ ಸಂದರ್ಭಗಳಲ್ಲಿ ಆ ರೀತಿಯಾಗಿ ದಾನಕೊಡುವುದು ರೂಢಿಯಲ್ಲಿರುವ ಧಾರ್ಮಿಕ ಅಥವಾ ಸಾಮಾಜಿಕ ಪದ್ಧತಿಗನುಗುಣವಾಗಿದ್ದರೆ, ಸರ್ಕಾರಿ ನೌಕರನು ತನ್ನ ಹತ್ತಿರದ ಸಂಬಂಧಿಗಳಿಂದ ದಾನವನ್ನು ಸ್ವೀಕರಿಸಬಹುದು.

– ಆದರೆ ಯಾವುದೇ ಅಂಥ ದಾನದ ಮೌಲ್ಯವು,–

[1][(i) ಯಾವುದೇ 'ಎ' ಸಮೂಹದ ಅಥವಾ 'ಬಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 5000 ರೂಗಿಂತ ಹೆಚ್ಚಾಗಿದ್ದರೆ;

(ii) ಯಾವುದೇ 'ಸಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 2500 ರೂ ಗಿಂತ ಹೆಚ್ಚಾಗಿದ್ದರೆ; ಮತ್ತು

(iii) ಯಾವುದೇ 'ಡಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 1250 ರೂ ಗಿಂತ ಹೆಚ್ಚಾಗಿದ್ದರೆ][1].

– ಅವನು ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಆಸುಇ 6 ಎಸ್‌ಆರ್‌ಸಿ 2004, ದಿನಾಂಕ 16ನೇ ನವೆಂಬರ್ 2006ರ ಮೂಲಕ ಪ್ರತಿಯೋಜಿಸಲಾಗಿದೆ.

(3) (2)ನೇ ಉಪನಿಯಮದಲ್ಲಿ ನಿರ್ದಿಷ್ಟಪಡಿಸಿದ ಸಂದರ್ಭಗಳಲ್ಲಿ, ಸರ್ಕಾರಿ ನೌಕರನು ತನ್ನೊಂದಿಗೆ ಯಾವುದೇ ರೀತಿಯ ಅಧಿಕೃತ ವ್ಯವಹಾರಗಳನ್ನು ಹೊಂದಿಲ್ಲದ ಆಪ್ತ ಸ್ನೇಹಿತನಿಂದ ದಾನಗಳನ್ನು ಸ್ವೀಕರಿಸಬಹುದು.

ಆದರೆ ಯಾವುದೇ ಅಂಥ ದಾನದ ಮೌಲ್ಯವು,–

[1][(i) ಯಾವುದೇ 'ಎ' ಸಮೂಹದ ಅಥವಾ 'ಬಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 2500 ರೂಗಿಂತ ಹೆಚ್ಚಾಗಿದ್ದರೆ;

(ii) ಯಾವುದೇ 'ಸಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 1000 ರೂ ಗಿಂತ ಹೆಚ್ಚಾಗಿದ್ದರೆ ಮತ್ತು;

(iii) ಯಾವುದೇ 'ಡಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 500 ರೂ ಗಿಂತ ಹೆಚ್ಚಾಗಿದ್ದರೆ][1]

– ಅವನು ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಆಸುಇ 6 ಎಸ್‌ಆರ್‌ಸಿ 2004, ದಿನಾಂಕ 16ನೇ ನವೆಂಬರ್ 2006ರ ಮೂಲಕ ಪ್ರತಿಯೋಜಿಸಲಾಗಿದೆ.

(4) ಇತರ ಯಾವುದೇ ಸಂದರ್ಭದಲ್ಲಿ, ಸರ್ಕಾರಿ ನೌಕರನು ಯಾವುದೇ ದಾನವನ್ನು,–

– ಅದರ ಮೌಲ್ಯವು,–

[1][(i) ಯಾವುದೇ 'ಎ' ಸಮೂಹದ ಅಥವಾ 'ಬಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 750 ರೂ ಗಿಂತ ಹೆಚ್ಚಾಗಿದ್ದರೆ; ಮತ್ತು

(ii) ಯಾವುದೇ 'ಸಿ' ಸಮೂಹದ ಅಥವಾ 'ಡಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 250 ರೂ. ಗಿಂತ ಹೆಚ್ಚಾಗಿದ್ದರೆ][1].

1. ಅಧಿಸೂಚನೆ ಸಂಖ್ಯೆ ಸಿಆಸುಇ 6 ಎಸ್‌ಆರ್‌ಸಿ 2004 ದಿನಾಂಕ 16ನೇ ನವೆಂಬರ್, 2006ರ ಮೂಲಕ ಪ್ರತಿಯೋಜಿಸಲಾಗಿದೆ.

– ಸರ್ಕಾರದ ಮಂಜೂರಾತಿಯನ್ನು ಪಡೆಯದೆ ಸ್ವೀಕರಿಸತಕ್ಕದ್ದಲ್ಲ [1][ಅಥವಾ ಅವನ ಕುಟುಂಬದ ಯಾರೇ ಸದಸ್ಯನು ಅಥವಾ ಅವನ ಪರವಾಗಿ ಕಾರ್ಯನಿರ್ವಹಿಸುವ ಯಾರೇ ಇತರ ವ್ಯಕ್ತಿಯು ಸ್ವೀಕರಿಸಲು][1] ಅನುಮತಿಸತಕ್ಕದ್ದಲ್ಲ.

1. ಅಧಿಸೂಚನೆ ಸಂಖ್ಯೆ ಸಿಆಸುಇ 4 ಎಸ್‌ಆರ್‌ಸಿ 76, ದಿನಾಂಕ 2ನೇ ನವೆಂಬರ್, 1976, ಕೆಜಿಡಿ 18ನೇ ನವೆಂಬರ್ 1976ರ ಮೂಲಕ ಸೇರಿಸಲಾಗಿದೆ.

[1][**14ಎ. ವಧು/ ವರದಕ್ಷಿಣೆ.**– ಯಾರೇ ಸರ್ಕಾರಿ ನೌಕರನು,–

(i) ವಧು/ ವರದಕ್ಷಿಣೆಯನ್ನು ಕೊಡತಕ್ಕದ್ದಲ್ಲ ಅಥವಾ ತೆಗೆದುಕೊಳ್ಳತಕ್ಕದ್ದಲ್ಲ ಅಥವಾ ಕೊಡಲು ಅಥವಾ ತೆಗೆದುಕೊಳ್ಳಲು ದುಷ್ಪ್ರೇರಿಸತಕ್ಕದ್ದಲ್ಲ; ಅಥವಾ

(ii) ವಧುವಿನ ಅಥವಾ ಸಂದರ್ಭಾನುಸಾರ ವರನ ತಂದೆ ತಾಯಿಯರನ್ನು ಅಥವಾ ಪೋಷಕರನ್ನು ವಧು/ವರದಕ್ಷಿಣೆಯನ್ನು ಕೊಡುವಂತೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಒತ್ತಾಯಪಡಿಸತಕ್ಕದ್ದಲ್ಲ.

**ವಿವರಣೆ.**– ಈ ನಿಯಮದ ಉದ್ದೇಶಗಳಿಗಾಗಿ ವಧು/ವರದಕ್ಷಿಣೆಯು, ವಧು/ವರದಕ್ಷಿಣೆ ನಿಷೇಧ ಅಧಿನಿಯಮ, 1961 (1961ರ ಕೇಂದ್ರ ಅಧಿನಿಯಮ 28)ರಲ್ಲಿ ಕೊಟ್ಟಿರುವ ಅರ್ಥವನ್ನೇ ಹೊಂದಿರತಕ್ಕದ್ದು][1].

1. ಅಧಿಸೂಚನೆ ಸಂಖ್ಯೆ ಸಿಆಸುಇ 4 ಎಸ್‌ಆರ್‌ಸಿ 76, ದಿನಾಂಕ 2ನೇ ನವೆಂಬರ್, 1976, ಕೆಜಿಡಿ 18ನೇ ನವೆಂಬರ್ 1976ರ ಮೂಲಕ ಸೇರಿಸಲಾಗಿದೆ.

**15. ಸರ್ಕಾರಿ ನೌಕರನ ಗೌರವಾರ್ಥ ಸಾರ್ವಜನಿಕ ಸಮಾರಂಭ ನಡೆಸುವುದು.**– ಯಾರೇ ಸರ್ಕಾರಿ ನೌಕರನು, ಸರ್ಕಾರದಿಂದ ಪೂರ್ವಾಮಂಜೂರಾತಿಯನ್ನು ಪಡೆದ ಹೊರತು, ತನ್ನ ಗೌರವಾರ್ಥ ಅಥವಾ ಯಾರೇ ಸರ್ಕಾರಿ ನೌಕರನ ಗೌರವಾರ್ಥ ಯಾವುದೇ ಗೌರವಪೂರ್ವಕ ಅಥವಾ ಸಮಾರೋಪ ಬಿನ್ನವತ್ತಳೆಯನ್ನು ಸ್ವೀಕರಿಸತಕ್ಕದ್ದಲ್ಲ ಅಥವಾ ಯಾವುದೇ ಪ್ರಶಸ್ತಿ ಪತ್ರಗಳನ್ನು ಸ್ವೀಕರಿಸತಕ್ಕದ್ದಲ್ಲ ಅಥವಾ ಏರ್ಪಡಿಸಿದ ಯಾವುದೇ ಸಭೆಯಲ್ಲಿ ಅಥವಾ ಯಾವುದೇ ಮನೋರಂಜನ ಕಾರ್ಯಕ್ರಮದಲ್ಲಿ ಭಾಗವಹಿಸತಕ್ಕದ್ದಲ್ಲ:

ಪರಂತು, ಈ ನಿಯಮದಲ್ಲಿರುವುದು ಯಾವುದೂ,–

(i) ಸರ್ಕಾರಿ ನೌಕರನು ಅಥವಾ ಇತರ ಯಾರೇ ಸರ್ಕಾರಿ ನೌಕರನು ನಿವೃತ್ತಿ ಹೊಂದಿದ ಅಥವಾ ವರ್ಗಾವಣೆ ಹೊಂದಿದ ಅಥವಾ ಯಾರೇ ವ್ಯಕ್ತಿಯು ಯಾವುದೇ ಸರ್ಕಾರಿ ಸೇವೆಯನ್ನು ಇತ್ತೀಚೆಗೆ ಬಿಟ್ಟುಹೋದ ಸಂದರ್ಭಗಳಲ್ಲಿ, ಅವನ ಗೌರವಾರ್ಥವಾಗಿ ಏರ್ಪಡಿಸಿದಂತಹ ಪ್ರಮುಖವಾಗಿ ಖಾಸಗಿ ಮತ್ತು ಅನೌಪಚಾರಿಕ ಸ್ವರೂಪದ ಬೀಳ್ಕೊಡುಗೆ ಸಮಾರಂಭಕ್ಕೆ; ಅಥವಾ

(ii) ಸಾರ್ವಜನಿಕ ಸಂಘಗಳು ಅಥವಾ ಸಂಸ್ಥೆಗಳು ಏರ್ಪಡಿಸಿದ ಸರಳ ಮತ್ತು ದುಬಾರಿಯಲ್ಲದ ಆದಾರಾತಿಥ್ಯವನ್ನು ಸ್ವೀಕರಿಸುವುದಕ್ಕೆ

– ಅನ್ವಯವಾಗತಕ್ಕದ್ದಲ್ಲ.

**ಟಿಪ್ಪಣಿ:**– ಯಾರೇ ಸರ್ಕಾರಿ ನೌಕರನನ್ನು, ಯಾವುದೇ ಬೀಳ್ಕೊಡುಗೆ ಸಮಾರಂಭದ ಪ್ರಯುಕ್ತ, ಅದು ಪ್ರಮುಖವಾಗಿ ಖಾಸಗಿ ಅಥವಾ ಅನೌಪಚಾರಿಕ ಸ್ವರೂಪದ್ದಾಗಿದ್ದರೂ, ವಂತಿಗೆಯನ್ನು ನೀಡುವಂತೆ ಯಾವುದೇ ರೀತಿಯ ಒತ್ತಡ ತರುವುದನ್ನು ಅಥವಾ ಪ್ರಭಾವ ಬೀರುವುದನ್ನು ಮತ್ತು III ಅಥವಾ IVನೇ ವರ್ಗಕ್ಕೆ ಸೇರದ ಸರ್ಕಾರಿ ನೌಕರನ ಸತ್ಕಾರಕ್ಕಾಗಿ ಯಾವುದೇ ಸಂದರ್ಭದಲ್ಲಿ ವರ್ಗ– III ಕ್ಕೆ ಅಥವಾ ವರ್ಗ– IV ಕ್ಕೆ ಸೇರಿದ ನೌಕರರಿಂದ ವಂತಿಗೆ ಸಂಗ್ರಹಿಸುವುದನ್ನು ನಿಷೇಧಿಸಲಾಗಿದೆ.

**16. ಖಾಸಗಿ ವ್ಯಾಪಾರ ಅಥವಾ ಉದ್ಯೋಗ.**–(1) ಯಾರೇ ಸರ್ಕಾರಿ ನೌಕರನು, ಸರ್ಕಾರದಿಂದ ಪೂರ್ವಾಮಂಜೂರಾತಿಯನ್ನು ಪಡೆದ ಹೊರತು, ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ರೀತಿಯ ವ್ಯಾಪಾರದಲ್ಲಿ ಅಥವಾ ವ್ಯವಹಾರದಲ್ಲಿ ತೊಡಗತಕ್ಕದ್ದಲ್ಲ ಅಥವಾ [1][ಯಾವುದೇ ಇತರೆ ಉದ್ಯೋಗಕ್ಕಾಗಿ ಮಾತುಕತೆ ನಡೆಸತಕ್ಕದ್ದಲ್ಲ ಅಥವಾ ಯಾವುದೇ ಇತರ ಉದ್ಯೋಗವನ್ನು ಕೈಗೊಳ್ಳತಕ್ಕದ್ದಲ್ಲ][1].

1. ಅಧಿಸೂಚನೆ ಸಂಖ್ಯೆ ಜಿಎಡಿ 1 ಎಸ್‌ಆರ್‌ಸಿ 75, ದಿನಾಂಕ 6ನೇ ಅಕ್ಟೋಬರ್ 1975 ಕೆಜಿಡಿ 23ನೇ ಅಕ್ಟೋಬರ್ 1975ರ ಮೂಲಕ ಪ್ರತಿಯೋಜಿಸಲಾಗಿದೆ.

[1][ಪರಂತು, ಸರ್ಕಾರಿ ನೌಕರನು ಅಂಥ ಮಂಜೂರಾತಿಯನ್ನು ಪಡೆಯದೆ ಸಾಮಾಜಿಕ ಅಥವಾ ಧರ್ಮಾರ್ಥ ಸ್ವರೂಪದ ಗೌರವಾರ್ಥ ಕೆಲಸಗಳನ್ನು ಅಥವಾ ಸಾಹಿತ್ಯ, ಕಲಾತ್ಮಕ ಅಥವಾ ವೈಜ್ಞಾನಿಕ ಸ್ವರೂಪದ ಸಾಂದರ್ಭಿಕ ಕೆಲಸಗಳನ್ನು ಈ ಮುಂದಿನ ಷರತ್ತುಗಳಿಗೊಳಪಟ್ಟು ಕೈಗೊಳ್ಳಬಹುದು, ಎಂದರೆ:–

(i) ಅಂಥ ಯಾವುದೇ ಕೆಲಸಗಳನ್ನು ತಾನು ಕೈಗೊಂಡ ಒಂದು ತಿಂಗಳೊಳಗಾಗಿ ಅವನು ಸರ್ಕಾರಕ್ಕೆ ಅದರ ಸಂಪೂರ್ಣ ವಿವರಗಳನ್ನು ವರದಿ ಮಾಡತಕ್ಕದ್ದು;

(ii) ಅದರಿಂದ ಆತನ ಅಧಿಕೃತ ಕರ್ತವ್ಯಗಳಿಗೆ ತೊಂದರೆಯಾಗಬಾರದು; ಮತ್ತು

(iii) ಯಾವುದೇ ಅಂಥ ಕೆಲಸವನ್ನು ಮುಂದುವರೆಸಬಾರದೆಂದು ಸರ್ಕಾರವು ನಿರ್ದೇಶಿಸಿದರೆ ಅವನು ಅಂಥ ಕೆಲಸವನ್ನು ನಿಲ್ಲಿಸತಕ್ಕದ್ದು:

ಮತ್ತೂ ಪರಂತು, ಯಾವುದೇ ಅಂಥ ಕೆಲಸವನ್ನು ಕೈಗೊಳ್ಳುವುದರಲ್ಲಿ ಚುನಾವಣೆ ಮೂಲಕ ತುಂಬಬೇಕಾದ ಪದವನ್ನು ಧಾರಣಮಾಡುವುದನ್ನು ಒಳಗೊಂಡಿದ್ದರೆ ಸರ್ಕಾರದ ಪೂರ್ವ ಮಂಜೂರಾತಿಯಿಲ್ಲದೆ ಅಂತಹ ಯಾವುದೇ ಪದದ ಚುನಾವಣೆಗೆ ಸ್ಪರ್ಧಿಸತಕ್ಕದ್ದಲ್ಲ.

**ವಿವರಣೆ** I:– ಎರಡನೇ ಪರಂತುಕದಲ್ಲಿ ಉಲ್ಲೇಖಿಸಲಾದ ಚುನಾವಣೆ ಮೂಲಕ ತುಂಬುಬೇಕಾದ ಪದಕ್ಕಾಗಿ ಸ್ಪರ್ಧಿಸುವ ಅಭ್ಯರ್ಥಿಯ ಅಥವಾ ಅಭ್ಯರ್ಥಿಗಳ ಪರವಾಗಿ ಸರ್ಕಾರಿ ನೌಕರನು ಪ್ರಚಾರ ಮಾಡುವುದನ್ನು ಈ ಉಪನಿಯಮದ ಉಲ್ಲಂಘನೆಯೆಂದು ಭಾವಿಸತಕ್ಕದ್ದು.

**ವಿವರಣೆ** II:– ಸರ್ಕಾರಿ ನೌಕರನು ತನ್ನ ಹೆಂಡತಿಯ ಅಥವಾ ತನ್ನ ಕುಟುಂಬದ ಯಾರೇ ಇತರ ಸದಸ್ಯನ ಒಡೆತನದಲ್ಲಿರುವ ಅಥವಾ ನಿರ್ವಹಣೆಯಲ್ಲಿರುವ ವ್ಯವಹಾರವನ್ನು ಅಥವಾ ವಿಮಾ ಏಜೆನ್ಸಿಯನ್ನು ಅಥವಾ ಕಮೀಷನ್ ಏಜೆನ್ಸಿಯನ್ನು ಬೆಂಬಲಿಸಿ ಪ್ರಚಾರ ಮಾಡುವುದನ್ನು ಈ ಉಪ ನಿಯಮದ ಉಲ್ಲಂಘನೆಯೆಂದು ಭಾವಿಸತಕ್ಕದ್ದು][1].

1. ಅಧಿಸೂಚನೆ ಸಂಖ್ಯೆ ಜಿಎಡಿ 13 ಎಸ್‌ಆರ್‌ಸಿ 73, ದಿನಾಂಕ 31ನೇ ಡಿಸೆಂಬರ್ 1973. ಕೆಜಿಡಿ 14ನೇ ಫೆಬ್ರವರಿ 1974ರ ಮೂಲಕ ಪ್ರತಿಯೋಜಿಸಲಾಗಿದೆ.

(2) ಪ್ರತಿಯೊಬ್ಬ ಸರ್ಕಾರಿ ನೌಕರನು ಅಥವಾ ಅವನ ಕುಟುಂಬದ ಯಾರೇ ಸದಸ್ಯನು ವ್ಯಾಪಾರದಲ್ಲಿ ಅಥವಾ ವ್ಯವಹಾರದಲ್ಲಿ ತೊಡಗಿದ್ದರೆ ಅಥವಾ ವಿಮಾ ಏಜೆನ್ಸಿಯ ಅಥವಾ ಕಮೀಷನ್ ಏಜೆನ್ಸಿಯ ಒಡೆತನ ಹೊಂದಿದ್ದರೆ ಅಥವಾ ನಿರ್ವಹಣೆ ಮಾಡುತ್ತಿದ್ದರೆ ಆ ಬಗ್ಗೆ ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

(3) ಯಾರೇ ಸರ್ಕಾರಿ ನೌಕರನು ತನ್ನ ಅಧಿಕೃತ ಕಾರ್ಯಗಳನ್ನು ನಿರ್ವಹಿಸುವಾಗ ಹೊರತು, ಕಂಪನಿಗಳ ಅಧಿನಿಯಮ, 1956ರ (1956ರ ಕೇಂದ್ರ ಅಧಿನಿಯಮ 1) ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಮೇರೆಗೆ ನೋಂದಾಯಿಸಬೇಕಾದ ಅಗತ್ಯವಿರುವ ಯಾವುದೇ ಬ್ಯಾಂಕನ್ನು ಅಥವಾ ಇತರ ಕಂಪನಿಯನ್ನು ಅಥವಾ ವಾಣಿಜ್ಯ ಉದ್ದೇಶಕ್ಕಾಗಿ ಯಾವುದೇ ಸಹಕಾರ ಸಂಘವನ್ನು ಸರ್ಕಾರದ ಪೂರ್ವ ಮಂಜೂರಾತಿ ಪಡೆಯದೆ ನೋಂದಾಯಿಸುವ, ಉತ್ತೇಜಿಸುವ ಅಥವಾ ನಿರ್ವಹಣೆ ಮಾಡುವ ಕಾರ್ಯದಲ್ಲಿ ಪಾಲ್ಗೊಳ್ಳತಕ್ಕದ್ದಲ್ಲ:

ಪರಂತು, ಸರ್ಕಾರಿ ನೌಕರನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959 (ಕರ್ನಾಟಕ ಅಧಿನಿಯಮ 1959ರ 11)ರ ಮೇರೆಗೆ ನೋಂದಾಯಿತವಾದ ಅಥವಾ ನೋಂದಾಯಿತವಾಗಿದೆಯೆಂದು ಭಾವಿಸಲಾದ ಪ್ರಮುಖವಾಗಿ ಸರ್ಕಾರಿ ನೌಕರರ ಪ್ರಯೋಜನಗಳಿಗಾಗಿ ಸಹಕಾರ ಸಂಘವನ್ನು ಅಥವಾ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960 (ಕರ್ನಾಟಕ ಅಧಿನಿಯಮ 1960ರ 17)ರ ಮೇರೆಗೆ ನೋಂದಾಯಿತವಾದ ಅಥವಾ ನೋಂದಾಯಿತವಾಗಿದೆಯೆಂದು ಭಾವಿಸಲಾದ ಸಾಹಿತ್ಯಕ, ವೈಜ್ಞಾನಿಕ ಅಥವಾ ಧರ್ಮಾರ್ಥ ಸಂಘವನ್ನು ನೋಂದಾಯಿಸುವ, ಉತ್ತೇಜಿಸುವ ಅಥವಾ ನಿರ್ವಹಣೆ ಮಾಡುವ ಕಾರ್ಯದಲ್ಲಿ ಪಾಲ್ಗೊಳ್ಳಬಹುದು.

(4) ಯಾರೇ ಸರ್ಕಾರಿ ನೌಕರನು ನಿಯಮಿಸಿದ ಪ್ರಾಧಿಕಾರದಿಂದ ಸಾಮಾನ್ಯ ಅಥವಾ ವಿಶೇಷ ಮಂಜೂರಾತಿ ಪಡೆಯದೆ ಯಾವುದೇ ಸಾರ್ವಜನಿಕ ಸಂಸ್ಥೆಗೆ ಅಥವಾ ಯಾರೇ ಖಾಸಗಿ ವ್ಯಕ್ತಿಗೆ ಮಾಡಿಕೊಟ್ಟ ಕೆಲಸಕ್ಕಾಗಿ ಯಾವುದೇ ಶುಲ್ಕವನ್ನು ತೆಗೆದುಕೊಳ್ಳತಕ್ಕದ್ದಲ್ಲ.

**17. ವೈದ್ಯಾಧಿಕಾರಿಯು ಖಾಸಗಿ ಸಂಸ್ಥೆಯಲ್ಲಿ ಭಾಗಿಯಾಗಬಾರದು.–** ಯಾರೇ ವೈದ್ಯಾಧಿಕಾರಿಯು ಯಾವುದೇ ಖಾಸಗಿ ನರ್ಸಿಂಗ್ ಹೋಂಅನ್ನು, ಆಸ್ಪತ್ರೆಯನ್ನು ಅಥವಾ ಅಂಥದೇ ಸಂಸ್ಥೆಯನ್ನು ನಡೆಸತಕ್ಕದ್ದಲ್ಲ ಅಥವಾ ಅವುಗಳಲ್ಲಿ ಹಣಕಾಸು ಹಿತಾಸಕ್ತಿ ಹೊಂದಿರತಕ್ಕದ್ದಲ್ಲ ಅಥವಾ ಹಣ ಸಂದಾಯ ಮಾಡುವ ರೋಗಿಗಳನ್ನು ಅವನು ರೂಢಿಗತವಾಗಿ ತನ್ನ ಸ್ವಂತ ಮನೆಯಲ್ಲಿ, 24 ಗಂಟೆಗಳಿಗಿಂತ ಹೆಚ್ಚು ಕಾಲ ಇಟ್ಟುಕೊಳ್ಳತಕ್ಕದ್ದಲ್ಲ. ಆದಾಗ್ಯೂ, ಅವನು ಖಾಸಗಿ ನರ್ಸಿಂಗ್ ಹೋಂನಲ್ಲಿ

ರೋಗಿಗಳಿಗೆ ಚಿಕಿತ್ಸೆ ನೀಡಬಹುದು. ಪರಂತು ತನ್ನ ಬಳಿಗೆ ಬರುವ ರೋಗಿಗಳ ದಾಖಲಾತಿಗೋಸ್ಕರವೇ ಆ ನರ್ಸಿಂಗ್ ಹೋಂ ಇರಬಾರದು. ಆದರೆ ಇತರ ಯಾರೇ ನೋಂದಾಯಿತ ವೈದ್ಯ ವೃತ್ತಿಗನ ರೋಗಿಗಳ ದಾಖಲಾತಿಗೆ ಅದರಲ್ಲಿ ಅವಕಾಶವಿರಬೇಕು.

**18. ಮನ್ನಣೆ ಪಡೆದ ಶಾಲೆಯ ಉಪಯೋಗಕ್ಕಾಗಿ ಪಠ್ಯ ಪುಸ್ತಕವನ್ನು ಬರೆಯದಿರುವುದು.–** ಪಠ್ಯ ಪುಸ್ತಕಗಳ ಸಮಿತಿಯ ಸದಸ್ಯನಾಗಿರುವ ಯಾರೇ ಸರ್ಕಾರಿ ನೌಕರನು, ಅಂಥ ಸಮಿತಿಯ ಸದಸ್ಯತ್ವದ ಅವಧಿಯಲ್ಲಿ ಮನ್ನಣೆ ಪಡೆದ ಶಾಲೆಯಲ್ಲಿ ಉಪಯೋಗಕ್ಕಾಗಿ ಯಾವುದೇ ಪಠ್ಯ ಪುಸ್ತಕಗಳನ್ನು ಬರೆಯತಕ್ಕದ್ದಲ್ಲ ಅಥವಾ ಸಂಪಾದಿಸತಕ್ಕದ್ದಲ್ಲ.

**19. ಸೌಕರ್ಯಗಳ ಯುಕ್ತ ಬಳಕೆ.–** ಯಾರೇ ಸರ್ಕಾರಿ ನೌಕರನು ತನ್ನ ಸರ್ಕಾರಿ ಕರ್ತವ್ಯಗಳನ್ನು ನಿರ್ವಹಿಸುವುದಕ್ಕೆ ಅನುಕೂಲವಾಗುವಂತೆ ಸರ್ಕಾರವು ಆತನಿಗೆ ಒದಗಿಸಿರುವ ಸೌಕರ್ಯಗಳನ್ನು ದುರುಪಯೋಗಪಡಿಸಿಕೊಳ್ಳತಕ್ಕದ್ದಲ್ಲ ಅಥವಾ ಅಜಾಗರೂಕತೆಯಿಂದ ಬಳಸತಕ್ಕದ್ದಲ್ಲ.

**20. ಹಣ ಸಂದಾಯ ಮಾಡದೆ ಸೇವೆಗಳ ಉಪಯೋಗ.–** ಯಾರೇ ಸರ್ಕಾರಿ ನೌಕರನು, ಯಾವ ಸೇವೆಗೆ ಅಥವಾ ಮನರಂಜನೆಗೆ ಬಾಡಿಗೆಯನ್ನು ಅಥವಾ ದರವನ್ನು ಅಥವಾ ಪ್ರವೇಶ ಶುಲ್ಕವನ್ನು ವಿಧಿಸಲಾಗುವುದೋ ಆ ಯಾವುದೇ ಸೇವೆಯನ್ನು ಅಥವಾ ಮನರಂಜನೆಯನ್ನು ಸೂಕ್ತ ಮತ್ತು ಸಾಕಷ್ಟು ಹಣ ಸಂದಾಯ ಮಾಡದೆ ಉಪಯೋಗಿಸಿಕೊಳ್ಳತಕ್ಕದ್ದಲ್ಲ.

**21. ಬಂಡವಾಳ ಹೂಡಿಕೆ, ಸಾಲ ನೀಡಿಕೆ ಮತ್ತು ಸಾಲ ತೆಗೆದುಕೊಳ್ಳುವಿಕೆ.–**(1) ಯಾರೇ ಸರ್ಕಾರಿ ನೌಕರನು ಯಾವುದೇ ಸ್ಟಾಕಿನಲ್ಲಿ, ಷೇರಿನಲ್ಲಿ ಅಥವಾ ಇತರ ಬಂಡವಾಳ ಹೂಡಿಕೆಯಲ್ಲಿ ಸಟ್ಟಾ ವ್ಯವಹಾರ ಮಾಡತಕ್ಕದ್ದಲ್ಲ.

**ವಿವರಣೆ.–** ಷೇರುಗಳನ್ನು, ಭದ್ರತಾ ಪತ್ರಗಳನ್ನು ಅಥವಾ ಇತರ ಬಂಡವಾಳ ಹೂಡಿಕೆಗಳನ್ನು ಮೇಲಿಂದ ಮೇಲೆ ಖರೀದಿ ಮಾಡುವುದನ್ನು ಅಥವಾ ಮಾರಾಟ ಮಾಡುವುದನ್ನು ಅಥವಾ ಅವೆರಡನ್ನೂ ಮಾಡುವುದನ್ನು ಈ ಉಪನಿಯಮದ ಅರ್ಥ ವ್ಯಾಪ್ತಿಯೊಳಗೆ ಸಟ್ಟಾ ವ್ಯವಹಾರವೆಂದು ಭಾವಿಸತಕ್ಕದ್ದು.

(2) ಯಾರೇ ಸರ್ಕಾರಿ ನೌಕರನು, ತನ್ನ ಸರ್ಕಾರಿ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ತನ್ನನ್ನು ಪೇಚಿಗೆ ಸಿಲುಕಿಸುವ ಅಥವಾ ತನ್ನ ಮೇಲೆ ಪರಿಣಾಮ ಉಂಟು ಮಾಡುವ ಸಂಭವವಿರುವ ಯಾವುದೇ ಬಂಡವಾಳ ಹೂಡಿಕೆ ಮಾಡತಕ್ಕದ್ದಲ್ಲ ಅಥವಾ ತನ್ನ ಕುಟುಂಬದ ಯಾರೇ ವ್ಯಕ್ತಿಯು ಅಥವಾ ತನ್ನ ಪರವಾಗಿ ಕಾರ್ಯನಿರ್ವಹಿಸುತ್ತಿರುವ ಯಾರೇ ವ್ಯಕ್ತಿಯು ಯಾವುದೇ ಬಂಡವಾಳ ಹೂಡಲು ಅನುಮತಿಸತಕ್ಕದ್ದಲ್ಲ.

(3) ಯಾವುದೇ ವ್ಯವಹಾರವು (1)ನೇ ಉಪ–ನಿಯಮದಲ್ಲಿ ಅಥವಾ (2)ನೇ ಉಪನಿಯಮದಲ್ಲಿ ಹೇಳಿರುವಂಥ ಸ್ವರೂಪದ್ದೇ ಎಂಬ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಅದರ ಬಗ್ಗೆ ಸರ್ಕಾರದ ತೀರ್ಮಾನವು ಅಂತಿಮವಾದುದು ಆಗಿರತಕ್ಕದ್ದು.

(4) (i) ಯಾರೇ ಸರ್ಕಾರಿ ನೌಕರನು, [1][**ಸರ್ಕಾರದ ಪೂರ್ವ ಮಂಜೂರಾತಿಯನ್ನು ಪಡೆದ ಹೊರತು ಮತ್ತು**][1] ತಾನೇ ಆಗಲಿ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನ ಅಥವಾ ತನ್ನ ಪರವಾಗಿ ಕಾರ್ಯನಿರ್ವಹಿಸುತ್ತಿರುವ ಇತರ ಯಾರೇ ವ್ಯಕ್ತಿಯ ಮೂಲಕ, ಬ್ಯಾಂಕಿಂಗ್ ವ್ಯವಹಾರವನ್ನು ನಡೆಸಲು ವಿಧ್ಯುಕ್ತವಾಗಿ ಅಧಿಕಾರ ಪಡೆದ ಸುಸ್ಥಾಪಿತವಾದ ಬ್ಯಾಂಕಿನ ಅಥವಾ ಫರ್ಮಿನ ಜೊತೆ ವ್ಯವಹಾರ ನಡೆಸುವ ಸಾಮಾನ್ಯ ಕ್ರಮದಲ್ಲಿ ಹೊರತು:–

(ಎ) ತನ್ನ ಅಧಿಕಾರದ ಸ್ಥಳೀಯ ಪರಿಮಿತಿಯೊಳಗೆ ಇರುವ ಯಾರೇ ವ್ಯಕ್ತಿಗೆ ಅಥವಾ ಯಾರೇ ವ್ಯಕ್ತಿಯಿಂದ ಅಥವಾ ತಾನು ಯಾರೊಂದಿಗೆ ಅಧಿಕೃತ ವ್ಯವಹಾರ ನಡೆಸುವ ಸಂಭವವಿದೆಯೋ, ಆ ವ್ಯಕ್ತಿಗೆ ಅಥವಾ ಆ ವ್ಯಕ್ತಿಯಿಂದ ಯಜಮಾನನಾಗಿ ಅಥವಾ ಏಜೆಂಟನಾಗಿ ಸಾಲ ನೀಡತಕ್ಕದ್ದಲ್ಲ ಅಥವಾ ಸಾಲ ಪಡೆಯತಕ್ಕದ್ದಲ್ಲ ಅಥವಾ ಅಂಥ ವ್ಯಕ್ತಿಯ ಹಣಕಾಸು ಬಾಧ್ಯತೆಗೆ ತಾನು ಬೇರೆ ಯಾವ ರೀತಿಯಲ್ಲೂ ಒಳಗಾಗತಕ್ಕದ್ದಲ್ಲ; ಅಥವಾ

(ಬಿ) ಬಡ್ಡಿಗಾಗಿ ಅಥವಾ ಹಣವನ್ನು ವಾಪಸ್ಸು ಮಾಡುವ ಕಾಲಕ್ಕೆ ಹಣದ ರೂಪದಲ್ಲಿ ಅಥವಾ ವಸ್ತು ರೂಪದಲ್ಲಿ ಕೊಡುವಂತೆ ವಿಧಿಸುವ ಅಥವಾ ಸಂದಾಯ ಮಾಡುವ ರೀತಿಯಲ್ಲಿ ಯಾರೇ ವ್ಯಕ್ತಿಗೆ ಹಣ ಸಾಲ ನೀಡತಕ್ಕದ್ದಲ್ಲ:

1. ಅಧಿಸೂಚನೆ ಸಂಖ್ಯೆ ಸಿಆಸುಇ 2 ಎಸ್‌ಆರ್‌ಸಿ 78, ದಿನಾಂಕ 28ನೇ ಸೆಪ್ಟೆಂಬರ್, 1978 ಕೆಜಿಡಿ 12ನೇ ಅಕ್ಟೋಬರ್ 1978ರ ಮೂಲಕ ಸೇರಿಸಲಾಗಿದೆ.

ಪರಂತು, ಸರ್ಕಾರಿ ನೌಕರನು ತನ್ನ ಸಂಬಂಧಿಕನಿಗೆ ಅಥವಾ ಸಂಬಂಧಿಕನಿಂದ ಅಥವಾ ಆಪ್ತ ಮಿತ್ರನಿಗೆ ಅಥವಾ ಆಪ್ತ ಮಿತ್ರನಿಂದ [1][ತನ್ನ ಒಟ್ಟು ತಿಂಗಳ ಉಪಲಬ್ಧಿಗಳನ್ನು ಮೀರದಷ್ಟು ಮೊತ್ತವನ್ನು][1] ಕೇವಲ ತಾತ್ಕಾಲಿಕ ಸಾಲವಾಗಿ ಬಡ್ಡಿ ಇಲ್ಲದೆ ಕೊಡಬಹುದು ಅಥವಾ ತೆಗೆದುಕೊಳ್ಳಬಹುದು ಅಥವಾ ಪ್ರಾಮಾಣಿಕ ವ್ಯಾಪಾರಿಯೊಬ್ಬರೊಡನೆ ಸಾಲದ ಲೆಕ್ಕ ಪತ್ರವನ್ನಿಟ್ಟುಕೊಳ್ಳಬಹುದು ಅಥವಾ ತನ್ನ ಖಾಸಗಿ ನೌಕರನಿಗೆ ಮುಂಗಡ ಸಂಬಳ ಕೊಡಬಹುದು.

1. ಅಧಿಸೂಚನೆ ಸಂಖ್ಯೆ ಜಿಎಡಿ 5 ಎಸ್‌ಆರ್‌ಸಿ 73 ದಿನಾಂಕ 18ನೇ ಅಕ್ಟೋಬರ್, 1974 ಕೆಜಿಡಿ 18ನೇ ಅಕ್ಟೋಬರ್ 1974ರ ಮೂಲಕ ಪ್ರತಿಯೋಜಿಸಲಾಗಿದೆ.

**(ii)** ಯಾವ ಹುದ್ದೆಯ ಸ್ವರೂಪವು ಸರ್ಕಾರಿ ನೌಕರನು, (2)ನೇ ಉಪನಿಯಮದ ಅಥವಾ (4)ನೇ ಉಪನಿಯಮದ ಯಾವುದೇ ಉಪಬಂಧವನ್ನು ಉಲ್ಲಂಘಿಸುವುದನ್ನು ಒಳಗೊಂಡಿರಬಹುದಾಗಿದೆಯೋ ಆ ಸ್ವರೂಪದ ಹುದ್ದೆಗೆ ಅವನು ನೇಮಕಗೊಂಡಾಗ ಅಥವಾ ವರ್ಗಾವಣೆಯಾದಾಗ, ಅವನು, ಅಂಥ ಸಂದರ್ಭಗಳನ್ನು ಸರ್ಕಾರಕ್ಕೆ ತಕ್ಷಣವೇ ವರದಿ ಮಾಡತಕ್ಕದ್ದು ಮತ್ತು ಆ ತರುವಾಯ ಸರ್ಕಾರವು ಮಾಡಬಹುದಾದಂಥ ಆದೇಶಕ್ಕೆ ಅನುಸಾರವಾಗಿ ಕಾರ್ಯ ನಿರ್ವಹಿಸತಕ್ಕದ್ದು.

**22. ದಿವಾಳಿತನ ಮತ್ತು ರೂಢಿಗತ ಋಣಗ್ರಸ್ತತೆ.–** ಸರ್ಕಾರಿ ನೌಕರನು ಸಾಲ ಮಾಡುವುದನ್ನು ರೂಢಿ ಮಾಡಿಕೊಳ್ಳದಂತೆ ಅಥವಾ ದಿವಾಳಿಯಾಗದಂತೆ ತನ್ನ ಖಾಸಗೀ ವ್ಯವಹಾರಗಳನ್ನು ನಿರ್ವಹಿಸತಕ್ಕದ್ದು. ಯಾವ ಸರ್ಕಾರಿ ನೌಕರನ ವಿರುದ್ಧ ಅವನಿಂದ ಬಾಕಿಬರಬೇಕಾದ ಯಾವುದೇ ಸಾಲದ ವಸೂಲಿಗಾಗಿ ಅಥವಾ ಅವನನ್ನು ದಿವಾಳಿ ಎಂದು ನ್ಯಾಯ ನಿರ್ಣಯ ಮಾಡುವುದಕ್ಕಾಗಿ ಯಾವುವೇ ಕಾನೂನು ವ್ಯವಹರಣೆಗಳನ್ನು ಹೂಡಲಾಗಿದೆಯೋ ಆ ಸರ್ಕಾರಿ ನೌಕರನು ತಕ್ಷಣವೇ ಆ ಕಾನೂನು ವ್ಯವಹರಣೆಗಳ ಪೂರ್ಣ ಸಂಗತಿಗಳನ್ನು ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

**ಟಿಪ್ಪಣಿ:–** ಸಾಮಾನ್ಯ ಎಚ್ಚರಿಕೆ ವಹಿಸಿದರೂ ಮುಂಗಾಣಲು ತನ್ನಿಂದ ಸಾಧ್ಯವಾಗದಿದ್ದ ಅಥವಾ ತನ್ನ ಹತೋಟಿಯನ್ನು ಮೀರಿದಂಥ ಪರಿಸ್ಥಿತಿಗಳ ಪರಿಣಾಮವಾಗಿ ತಾನು ಸಾಲಗಾರ ಅಥವಾ ದಿವಾಳಿ ಆಗಬೇಕಾಯಿತೆಂದು ಮತ್ತು ತನ್ನ ದುಂದು ವೆಚ್ಚವು ಅಥವಾ ಕೆಟ್ಟ ಅಭ್ಯಾಸಗಳು ಅದಕ್ಕೆ ಕಾರಣವಲ್ಲವೆಂದು ರುಜುವಾತುಪಡಿಸುವ ಭಾರವು ಸರ್ಕಾರಿ ನೌಕರನ ಮೇಲೆ ಇರತಕ್ಕದ್ದು.

**23. ಚರ, ಸ್ಥಿರ ಮತ್ತು ಬೆಲೆ ಬಾಳುವ ಸ್ವತ್ತು.–** (1) ಪ್ರತಿಯೊಬ್ಬ ಸರ್ಕಾರಿ ನೌಕರನು ಯಾವುದೇ ಸೇವೆಗೆ ಅಥವಾ ಹುದ್ದೆಗೆ ಅವನ ಮೊದಲ ನೇಮಕ ಆದಾಗ ಮತ್ತು ಆ ತರುವಾಯ [1][ಮಾರ್ಚ್ 31ಕ್ಕೆ ಅಂತ್ಯಗೊಳ್ಳುವ] ಪ್ರತಿ ಹನ್ನೆರಡು ತಿಂಗಳ ಅಂತರದಲ್ಲಿ ತನ್ನ ಮತ್ತು ತನ್ನ ಕುಟುಂಬದ ಎಲ್ಲ ಸದಸ್ಯರ ಆಸ್ತಿಗಳ ಮತ್ತು ಹೊಣೆಗಾರಿಕೆಗಳ ವಿವರಪಟ್ಟಿಕೆಯನ್ನು ಈ ಮುಂದಿನವುಗಳ ಬಗ್ಗೆ ಪೂರ್ಣ ವಿವರಗಳನ್ನು ಒಳಗೊಂಡಂತೆ ಸರ್ಕಾರವು ನಿಯಮಿಸಬಹುದಾದಂಥ ನಮೂನೆಯಲ್ಲಿ ಸಲ್ಲಿಸತಕ್ಕದ್ದು,–

1. ಅಧಿಸೂಚನೆ ಸಂಖ್ಯೆ ಸಿಆಸುಇ 11 ಎಸ್‌ಆರ್‌ಸಿ 92 ದಿನಾಂಕ 25/26 ಮಾರ್ಚ್ 1994, ಕೆಜಿಡಿ 28ನೇ ಮಾರ್ಚ್ 1994ರ ಮೂಲಕ ಸೇರಿಸಲಾಗಿದೆ.

(ಎ) ತಾನು ಅಥವಾ ತನ್ನ ಕುಟುಂಬದ ಯಾರೇ ಸದಸ್ಯನಿಗೆ ಪಿತ್ರಾರ್ಜಿತವಾಗಿ ಬಂದ ಅಥವಾ ತಾನು ಅಥವಾ ತನ್ನ ಕುಟುಂಬದ ಯಾರೇ ಸದಸ್ಯನು ಒಡೆತನ ಹೊಂದಿರುವ ಅಥವಾ ತನ್ನ ಹೆಸರಿನಲ್ಲಾಗಲೀ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನ ಹೆಸರಿನಲ್ಲಾಗಲೀ ಅಥವಾ ಇತರ ಯಾರೇ ವ್ಯಕ್ತಿಗಳ ಹೆಸರಿನಲ್ಲಾಗಲೀ ಗುತ್ತಿಗೆ ಅಥವಾ ಅಡಮಾನದ ಮೂಲಕ ತನ್ನ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನು ಆರ್ಜಿಸಿರುವ ಸ್ವತ್ತು;

(ಬಿ) ತನಗೆ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನಿಗೆ ಪಿತ್ರಾರ್ಜಿತವಾಗಿ ಬಂದ ಅಥವಾ ಅದೇ ರೀತಿ ತಾನು ಅಥವಾ ತನ್ನ ಕುಟುಂಬದ ಯಾರೇ ಸದಸ್ಯನು ಒಡೆತನ ಹೊಂದಿದ, ಆರ್ಜಿಸಿದ ಅಥವಾ ಹೊಂದಿರುವ ಷೇರುಗಳು, ಡಿಬೆಂಚರುಗಳು ಮತ್ತು ಬ್ಯಾಂಕ್ ಠೇವಣಿಗಳೂ ಸೇರಿದಂತೆ ನಗದು;

(ಸಿ) ತನಗೆ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನಿಗೆ ಪಿತ್ರಾರ್ಜಿತವಾಗಿ ಬಂದ ಅಥವಾ ಅದೇ ರೀತಿ ತಾನು ಅಥವಾ ತನ್ನ ಕುಟುಂಬದ ಯಾರೇ ಸದಸ್ಯನು ಒಡೆತನ ಹೊಂದಿದ, ಆರ್ಜಿಸಿದ ಅಥವಾ ಹೊಂದಿರುವ ಇತರ ಯಾವುದೇ ಚರಾಸ್ತಿ;

(ಡಿ) ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ತಾನು ಅಥವಾ ತನ್ನ ಕುಟುಂಬದ ಯಾರೇ ಸದಸ್ಯನು ಮಾಡಿಕೊಂಡ ಸಾಲ ಅಥವಾ ಹೊತ್ತಿರುವ ಇತರ ಹೊಣೆಗಾರಿಕೆಗಳು;

**ಟಿಪ್ಪಣಿ I:–**(1)ನೇ ಉಪನಿಯಮವು [1][ಡಿ ಸಮೂಹದ] ನೌಕರರಿಗೆ ಸಾಮಾನ್ಯವಾಗಿ ಅನ್ವಯವಾಗತಕ್ಕದ್ದಲ್ಲ, ಸರ್ಕಾರವು ಅದು ಅಂಥ ಯಾವುದೇ ಸರ್ಕಾರಿ ನೌಕರನಿಗೆ ಅಥವಾ ಸರ್ಕಾರಿ ನೌಕರರ ವರ್ಗಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸಬಹುದು.

**ಟಿಪ್ಪಣಿ II:–** ಎಲ್ಲ ವಿವರಪಟ್ಟಿಕೆಗಳಲ್ಲೂ [1][ಎರಡು ಸಾವಿರ][1] ರೂಪಾಯಿಗಳಿಗಿಂತ ಕಡಿಮೆ ಬೆಲೆಯ ಚರ ಬಾಬುಗಳ ಮೌಲ್ಯವನ್ನು ಸೇರಿಸಿ ಒಂದೇ ಮೊತ್ತದಲ್ಲಿ ತೋರಿಸಬಹುದು. ಬಟ್ಟೆಗಳು, ಪಾತ್ರೆಗಳು, ಪಿಂಗಾಣಿ ಸಾಮಾನುಗಳು ಅಥವಾ ಪುಸ್ತಕಗಳಂಥ ದಿನಬಳಕೆಯ ವಸ್ತುಗಳ ಮೌಲ್ಯವನ್ನು ಅಂಥ ವಿವರಪಟ್ಟಿಕೆಗಳಲ್ಲಿ ಸೇರಿಸಬೇಕಾಗಿಲ್ಲ.

**ಟಿಪ್ಪಣಿ III:–** ಈ ನಿಯಮಗಳ ಪ್ರಾರಂಭದ ದಿನಾಂಕದಂದು ಸೇವೆಯಲ್ಲಿರುವ ಪ್ರತಿಯೊಬ್ಬ ಸರ್ಕಾರಿ ನೌಕರನು ಅಂಥ ಪ್ರಾರಂಭದ ತರುವಾಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಂದು ಅಥವಾ ಅದಕ್ಕೆ ಮೊದಲು ಈ ಉಪನಿಯಮದ ಮೇರೆಗೆ ವಿವರಪಟ್ಟಿಕೆಯನ್ನು ಸಲ್ಲಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಸಿಆಸುಇ 4 ಎಸ್‌ಆರ್‌ಸಿ 85 ದಿನಾಂಕ 30ನೇ ಡಿಸೆಂಬರ್ 1985 ಕೆಜಿಡಿ 27ನೇ ಮಾರ್ಚ್ 1986ರ ಮೂಲಕ ಪ್ರತಿಯೋಜಿಸಿದೆ.

(2) ಯಾರೇ ಸರ್ಕಾರಿ ನೌಕರನು ಅಥವಾ ಅವನ ಕುಟುಂಬದ ಯಾರೇ ಸದಸ್ಯನು ನಿಯಮಿಸಲಾದ ಪ್ರಾಧಿಕಾರಕ್ಕೆ ಮೊದಲೇ ತಿಳಿಸಿದ ಹೊರತು, ತನ್ನ ಸ್ವಂತ ಹೆಸರಿನಲ್ಲಾಗಲೀ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನ ಹೆಸರಿನಲ್ಲಾಗಲೀ ಗುತ್ತಿಗೆಯ, ಅಡಮಾನದ, ಖರೀದಿಯ, ಮಾರಾಟದ, ದಾನದ ಮೂಲಕ ಅಥವಾ ಅನ್ಯಥಾ ಯಾವುದೇ ಸ್ಥಿರ ಸ್ವತ್ತನ್ನು ಆರ್ಜಿಸತಕ್ಕದ್ದಲ್ಲ ಅಥವಾ ವಿಲೇ ಮಾಡತಕ್ಕದ್ದಲ್ಲ:

ಪರಂತು, ಸರ್ಕಾರಿ ನೌಕರನು, ಅಂಥ ಯಾವುದೇ ವ್ಯವಹಾರವನ್ನು,–

(i) ಸರ್ಕಾರಿ ನೌಕರನೊಂದಿಗೆ ಅಧಿಕೃತ ವ್ಯವಹಾರವನ್ನು ಹೊಂದಿರುವ ವ್ಯಕ್ತಿಯೊಂದಿಗೆ ಮಾಡುತ್ತಿರುವಲ್ಲಿ; ಅಥವಾ

(ii) ನಿಯತ ಅಥವಾ ಖ್ಯಾತ ವ್ಯಾಪಾರಿಯ ಮೂಲಕವಲ್ಲದೆ ಅನ್ಯಥಾ ಮಾಡುತ್ತಿರುವಲ್ಲಿ

– ನಿಯಮಿಸಲಾದ ಪ್ರಾಧಿಕಾರದ ಪೂರ್ವ ಮಂಜೂರಾತಿಯನ್ನು ಪಡೆದುಕೊಳ್ಳತಕ್ಕದ್ದು:

[1][ಮತ್ತೂ ಪರಂತು ಈ ಉಪನಿಯಮದಲ್ಲಿರುವುದು ಯಾವುದೂ, ಸರ್ಕಾರಿ ನೌಕರನ ಕುಟುಂಬದ ಸದಸ್ಯನು ಸರ್ಕಾರಿ ನೌಕರನದೇ/ಳದೇ ನಿಧಿಗಳಿಂದ ಬೇರೆಯದೇ ಆದ ಆತನ/ ಆಕೆಯ ಸ್ವಂತ ನಿಧಿಗಳಿಂದ (ಉಡುಗೊರೆಗಳು, ಪಿತ್ರಾರ್ಜಿತ, ಮೊದಲಾದವುಗಳೂ ಸೇರಿದಂತೆ) ಆತನ ಅಥವಾ ಆಕೆಯ ಸ್ವಂತ ಹೆಸರಿನಲ್ಲಿ ಮತ್ತು ಆತನ ಅಥವಾ ಆಕೆಯ ಸ್ವಂತ ಹಕ್ಕಿನಿಂದ ಮಾಡಿಕೊಂಡ ವ್ಯವಹಾರಗಳಿಗೆ ಅನ್ವಯವಾಗತಕ್ಕದ್ದಲ್ಲ][1].

1. ಅಧಿಸೂಚನೆ ಸಂಖ್ಯೆ ಡಿಪಿಎಆರ್ 6 ಎಸ್‌ಆರ್‌ಸಿ 2004 ದಿನಾಂಕ 16.11.2006ರ ಮೂಲಕ ಸೇರಿಸಲಾಗಿದೆ.

(3) ಪ್ರತಿಯೊಬ್ಬ ಸರ್ಕಾರಿ ನೌಕರನು, ತನ್ನ ಸ್ವಂತ ಹೆಸರಿನಲ್ಲಾಗಲೀ ಅಥವಾ ತನ್ನ ಕುಟುಂಬದ ಸದಸ್ಯನ ಹೆಸರಿನಲ್ಲಾಗಲೀ ತಾನು ಅಥವಾ ತನ್ನ ಕುಟುಂಬದ ಯಾರೇ ಸದಸ್ಯನು ಒಡೆತನ ಹೊಂದಿರುವ ಅಥವಾ ಧಾರಣ ಮಾಡಿರುವ ಚರಾಸ್ತಿಯ ಸಂಬಂಧದಲ್ಲಿ ಮಾಡುವ ಪ್ರತಿಯೊಂದು ವ್ಯವಹಾರವನ್ನು, ಯಾವುದೇ [1][ಸಮೂಹ–ಎ ಅಥವಾ ಸಮೂಹ–ಬಿ][1] ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ ಅಂಥ ಸ್ವತ್ತಿನ ಮೌಲ್ಯವು [2]*[ಹತ್ತು ಸಾವಿರ ರೂಪಾಯಿಗಳನ್ನು] ಮೀರಿದರೆ ಅಥವಾ ಯಾವುದೇ [1][ಸಮೂಹ ಸಿ ಅಥವಾ ಸಮೂಹ–ಡಿ] ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ [2]*[ಐದು ಸಾವಿರ ರೂಪಾಯಿಗಳನ್ನು] ಮೀರಿದರೆ, ನಿಯಮಿಸಲಾದ ಪ್ರಾಧಿಕಾರಿಗೆ ವರದಿ ಮಾಡತಕ್ಕದ್ದು:

1. ಅಧಿಸೂಚನೆ ಸಂಖ್ಯೆ ಡಿಪಿಎಆರ್ 4, ಎಸ್‌ಆರ್‌ಸಿ 85 ದಿನಾಂಕ 30ನೇ ಡಿಸೆಂಬರ್ 1985ರ ಮೂಲಕ ಪ್ರತಿಯೋಜಿಸಲಾಗಿದೆ.

2. ಅಧಿಸೂಚನೆ ಸಂಖ್ಯೆ ಡಿಪಿಎಆರ್ 6 ಎಸ್‌ಆರ್‌ಸಿ 2004 ದಿನಾಂಕ 16.11.2006ರ ಮೂಲಕ ಪ್ರತಿಯೋಜಿಸಲಾಗಿದೆ.

ಪರಂತು, ಸರ್ಕಾರಿ ನೌಕರನು ಅಂತಹ ವ್ಯವಹಾರವನ್ನು,–

(i) ಸರ್ಕಾರಿ ನೌಕರನೊಂದಿಗೆ ಅಧಿಕೃತ ವ್ಯವಹಾರವನ್ನು ಹೊಂದಿರುವ ವ್ಯಕ್ತಿಯೊಂದಿಗೆ ಮಾಡುತ್ತಿರುವಲ್ಲಿ; ಅಥವಾ

(ii) ನಿಯತ ಅಥವಾ ಖ್ಯಾತ ವ್ಯಾಪಾರಿಯ ಮೂಲಕವಲ್ಲದೆ ಅನ್ಯಥಾ ಮಾಡುತ್ತಿರುವಲ್ಲಿ

– ನಿಯಮಿಸಲಾದ ಪ್ರಾಧಿಕಾರದ ಪೂರ್ವಮಂಜೂರಾತಿ ಪಡೆದುಕೊಳ್ಳತಕ್ಕದ್ದು.

[1][ಮತ್ತೂ ಪರಂತು ಈ ಉಪನಿಯಮದಲ್ಲಿರುವುದು ಯಾವುದೂ, ಸರ್ಕಾರಿ ನೌಕರನ ಕುಟುಂಬದ ಸದಸ್ಯನು ಸರ್ಕಾರಿ ನೌಕರನದೇ/ಳದೇ ನಿಧಿಗಳಿಂದ ಬೇರೆಯದೇ ಆದ ಆತನ/ ಆಕೆಯ ಸ್ವಂತ ನಿಧಿಗಳಿಂದ (ಉಡುಗೊರೆಗಳು, ಪಿತ್ರಾರ್ಜಿತ, ಮೊದಲಾದವುಗಳೂ ಸೇರಿದಂತೆ) ಆತನ ಅಥವಾ ಆಕೆಯ ಸ್ವಂತ ಹೆಸರಿನಲ್ಲಿ ಮತ್ತು ಆತನ ಅಥವಾ ಆಕೆಯ ಸ್ವಂತ ಹಕ್ಕಿನಿಂದ ಮಾಡಿಕೊಂಡ ವ್ಯವಹಾರಗಳಿಗೆ ಅನ್ವಯವಾಗತಕ್ಕದ್ದಲ್ಲ][1].

1. ಅಧಿಸೂಚನೆ ಸಂಖ್ಯೆ. ಡಿಪಿಎಆರ್ 48 ಎಸ್‌ಆರ್‌ಸಿ 2007 ದಿನಾಂಕ 25.9.2008ರ ಮೂಲಕ ಸೇರಿಸಲಾಗಿದೆ.

[1][(3ಎ) ಪ್ರತಿಯೊಬ್ಬ ಸರ್ಕಾರಿ ನೌಕರನು, ತನ್ನ ಸಂಬಳ ಮತ್ತು ಭತ್ಯೆಗಳು, ವಿಮೆ ಅಥವಾ ಭವಿಷ್ಯನಿಧಿಯನ್ನು ಹೊರತುಪಡಿಸಿ ಇತರ ಮೂಲಗಳಿಂದ ತಾನು ಅಥವಾ ತನ್ನ ಕುಟುಂಬದ ಯಾರೇ ಸದಸ್ಯನು ಸ್ವೀಕರಿಸಿದ ನಗದಿಗೆ ಸಂಬಂಧಿಸಿದ ಪ್ರತಿಯೊಂದು ವ್ಯವಹಾರವನ್ನು, ಯಾವುದೇ [2][ಸಮೂಹ–ಎ ಅಥವಾ ಸಮೂಹ–ಬಿ][2] ಹುದ್ದೆಯನ್ನು ಧಾರಣ ಮಾಡಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ, ಅಂಥ ನಗದು [3][10,000 ರೂಪಾಯಿಗಳನ್ನು] ಮೀರಿದ್ದರೆ ಅಥವಾ ಯಾವುದೇ

[2][ಸಮೂಹ–ಸಿ ಅಥವಾ ಸಮೂಹ–ಡಿ][2] ಹುದ್ದೆಯನ್ನು ಧಾರಣ ಮಾಡಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ ಅಂಥ ನಗದು [3][5,000 ರೂಪಾಯಿಗಳನ್ನು] ಮೀರಿದ್ದರೆ ನಿಯಮಿಸಲಾದ ಪ್ರಾಧಿಕಾರಕ್ಕೆ ವರದಿ ಮಾಡತಕ್ಕದ್ದು.]

1. ಅಧಿಸೂಚನೆ ಸಂಖ್ಯೆ ಜಿಎಡಿ 14 ಎಸ್ಆರ್‌ಸಿ 71 ದಿನಾಂಕ 9.12.1971ರ ಮೂಲಕ ಸೇರಿಸಲಾಗಿದೆ.

2. ಅಧಿಸೂಚನೆ ಸಂಖ್ಯೆ ಡಿಪಿಎಆರ್ 4 ಎಸ್ಆರ್‌ಸಿ 85 ದಿನಾಂಕ 30.12.1985ರ ಮೂಲಕ ಪ್ರತಿಯೋಜಿಸಲಾಗಿದೆ.

3. ಅಧಿಸೂಚನೆ ಸಂಖ್ಯೆ ಡಿಪಿಎಆರ್ 6 ಎಸ್ಆರ್‌ಸಿ 2004 ದಿನಾಂಕ 16.11.2006ರ ಮೂಲಕ ಪ್ರತಿಯೋಜಿಸಲಾಗಿದೆ.

(4) ಸರ್ಕಾರವು ಅಥವಾ ನಿಯಮಿಸಲಾದ ಪ್ರಾಧಿಕಾರವು ಯಾವುದೇ ಕಾಲದಲ್ಲಿ, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ, ಸರ್ಕಾರಿ ನೌಕರನನ್ನು, ಆ ಆದೇಶದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ತಾನು ಅಥವಾ ತನ್ನ ಕುಟುಂಬದ ಯಾರೇ ಸದಸ್ಯನು ಅಥವಾ ತನ್ನ ಪರವಾಗಿ ತನ್ನ ಕುಟುಂಬದ ಯಾರೇ ಸದಸ್ಯನು ಹೊಂದಿದ ಅಥವಾ ಆರ್ಜಿಸಿದ ಅಂಥ ಚರ ಅಥವಾ ಸ್ಥಿರ ಸ್ವತ್ತಿನ ಪೂರ್ಣ ಮತ್ತು ಸಮಗ್ರ ವಿವರಪಟ್ಟಿಕೆಯನ್ನು ಆ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಒದಗಿಸುವಂತೆ ಅಗತ್ಯಪಡಿಸಬಹುದು. ಅಂಥ ವಿವರ ಪಟ್ಟಿಕೆಯು, ಅಂಥ ಸ್ವತ್ತನ್ನು ಯಾವ ರೀತಿಯಲ್ಲಿ ಅಥವಾ ಯಾವ ಮೂಲಗಳಿಂದ ಆರ್ಜಿಸಲಾಗಿದೆಯೋ ಆ ವಿವರಗಳನ್ನು ಒಳಗೊಂಡಿರಬೇಕೆಂದು ಸರ್ಕಾರವು ಅಥವಾ ನಿಯಮಿಸಲಾದ ಪ್ರಾಧಿಕಾರವು ಅಗತ್ಯಪಡಿಸಿದರೆ ಆ ವಿವರಗಳನ್ನು ಒಳಗೊಂಡಿತರಕ್ಕದ್ದು.

(5) ಸರ್ಕಾರವು (4)ನೇ ಉಪ ನಿಯಮವನ್ನು ಹೊರತುಪಡಿಸಿ [1]*[ಸಮೂಹ–ಸಿ ಅಥವಾ ಸಮೂಹ–ಡಿ] ಗೆ ಸೇರಿದ ಸರ್ಕಾರಿ ನೌಕರರ ಯಾವುದೇ ಪ್ರವರ್ಗವನ್ನು ಈ ನಿಯಮದ ಯಾವುವೇ ಉಪಬಂಧಗಳಿಂದ ವಿನಾಯಿತಿಗೊಳಿಸಬಹುದು.

1. ಅಧಿಸೂಚನೆ ಸಂಖ್ಯೆ ಡಿಪಿಎಆರ್ 4 ಎಸ್ಆರ್‌ಸಿ 85 ದಿನಾಂಕ 30.12.1985ರ ಮೂಲಕ ಪ್ರತಿಯೋಜಿಸಲಾಗಿದೆ.

**ವಿವರಣೆ:**– ಈ ನಿಯಮದ ಉದ್ದೇಶಗಳಿಗಾಗಿ,–

[1][(1) "ಗುತ್ತಿಗೆ" ಎಂದರೆ ಸರ್ಕಾರಿ ನೌಕರನೊಂದಿಗೆ ಯಾವುದೇ ಅಧಿಕೃತ ವ್ಯವಹಾರಗಳನ್ನು ಹೊಂದಿರುವ ವ್ಯಕ್ತಿಯಿಂದ ಪಡೆದುಕೊಳ್ಳಲಾದುದನ್ನು ಅಥವಾ ಆ ವ್ಯಕ್ತಿಗೆ ನೀಡಲಾಗಿರುವುದನ್ನು ಹೊರತುಪಡಿಸಿ, ವರ್ಷದಿಂದ ವರ್ಷಕ್ಕೆ ಅಥವಾ ಒಂದು ವರ್ಷ ಮೀರಿದ ಯಾವುದೇ ಅವಧಿಗೆ ಅಥವಾ ವಾರ್ಷಿಕ ಬಾಡಿಗೆ ಬರುವಂತಿರುವ ಸ್ಥಿರಾಸ್ತಿಯ ಗುತ್ತಿಗೆ ಎಂದು ಅರ್ಥ][1].

1. ಅಧಿಸೂಚನೆ ಸಂಖ್ಯೆ ಜಿಎಡಿ 1 ಎಸ್ಆರ್‌ಸಿ 75 ದಿನಾಂಕ 6ನೇ ಅಕ್ಟೋಬರ್ 1975ರ ಮೂಲಕ ಸೇರಿಸಲಾಗಿದೆ.

(2) "ಚರಾಸ್ತಿ" ಎಂಬ ಪದಾವಳಿಯು,–

(ಎ) **ಒಡವೆಗಳು, [1][ವಿಮಾ ಪಾಲಿಸಿಗಳು, ಭವಿಷ್ಯ ನಿಧಿ,] ಷೇರುಗಳು, ಭದ್ರತಾ ಪತ್ರಗಳು ಮತ್ತು ಡಿಬೆಂಚರುಗಳು;

1. ಅಧಿಸೂಚನೆ ಸಂಖ್ಯೆ ಜಿಎಡಿ 5 ಎಸ್ಆರ್‌ಸಿ 73 ದಿನಾಂಕ 9ನೇ ನವೆಂಬರ್ 1973ರ ಮೂಲಕ ಪ್ರತಿಯೋಜಿಸಲಾಗಿದೆ.

(ಬಿ) ಅಂಥ ಸರ್ಕಾರಿ ನೌಕರರು ಭದ್ರತೆಪಡೆದು ಅಥವಾ ಭದ್ರತೆ ಪಡೆಯದೆ ನೀಡಿದ ಸಾಲಗಳು;

(ಸಿ) ಮೋಟಾರು ಕಾರುಗಳು, ಮೋಟಾರು ಸೈಕಲ್ಲುಗಳು, ಕುದುರೆಗಳು ಅಥವಾ ಇತರ ಯಾವುದೇ ಸಾಗಣೆ ಸಾಧನಗಳು; ಮತ್ತು

(ಡಿ) ರೆಫ್ರಿಜಿರೇಟರುಗಳು, ರೇಡಿಯೋಗಳು, ರೇಡಿಯೋಗ್ರಾಂಗಳು [2][ದೂರದರ್ಶನ ಸೆಟ್ಟುಗಳು] ಟೇಪ್‌ರೆಕಾರ್ಡರುಗಳು ಮತ್ತು ಟ್ರಾನ್ಸಿಸ್ಟರುಗಳು

– ಇವುಗಳನ್ನು ಒಳಗೊಳ್ಳುತ್ತದೆ.

2. ಅಧಿಸೂಚನೆ ಸಂಖ್ಯೆ ಜಿಎಡಿ 1 ಎಸ್ಆರ್‌ಸಿ 75 ದಿನಾಂಕ 6ನೇ ಅಕ್ಟೋಬರ್ 1975ರ ಮೂಲಕ ಸೇರಿಸಲಾಗಿದೆ.

(3) "ನಿಯಮಿಸಿದ ಪ್ರಾಧಿಕಾರ" ಎಂದರೆ,–

(ಎ) [1][(i) ಕರ್ನಾಟಕ ನ್ಯಾಯಾಂಗ ಸೇವೆಗೆ ಸೇರಿದ ವ್ಯಕ್ತಿಗಳ ಸಂದರ್ಭದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯ][1].

(ii) ಯಾವುದೇ ಕೆಳ ಪ್ರಾಧಿಕಾರವನ್ನು ಯಾವುದೇ ಉದ್ದೇಶಕ್ಕಾಗಿ ಸರ್ಕಾರವು ವಿಶೇಷವಾಗಿ ನಿರ್ದಿಷ್ಟಪಡಿಸಿದ ಹೊರತು ಯಾವುದೇ ಸಮೂಹ ಎ ಹುದ್ದೆಯನ್ನು ಧಾರಣ ಮಾಡಿರುವ ಯಾರೇ ಸರ್ಕಾರಿ ನೌಕರನ ಸಂದರ್ಭದಲ್ಲಿ, ಸರ್ಕಾರ;

(iii) ಯಾವುದೇ ಸಮೂಹ ಬಿ ಹುದ್ದೆಯನ್ನು ಧಾರಣ ಮಾಡಿರುವ ಯಾರೇ ಸರ್ಕಾರಿ ನೌಕರನ ಸಂದರ್ಭದಲ್ಲಿ, ಇಲಾಖಾ ಮುಖ್ಯಸ್ಥರು;

(iv) ಯಾವುದೇ ಸಮೂಹ ಸಿ ಅಥವಾ ಸಮೂಹ ಡಿ ಹುದ್ದೆಯನ್ನು ಧಾರಣ ಮಾಡಿರುವ ಯಾರೇ ಸರ್ಕಾರಿ ನೌಕರನ ಸಂದರ್ಭದಲ್ಲಿ, ಕಚೇರಿ ಮುಖ್ಯಸ್ಥರು

– ಎಂದು ಅರ್ಥ.

1. ಅಧಿಸೂಚನೆ ಸಂ. ಜಿಎಡಿ 12 ಎಸ್‌ಆರ್‌ಸಿ 75, ದಿನಾಂಕ 1ನೇ ಡಿಸೆಂಬರ್ 1975 ಕೆಜಿಡಿ 11ನೇ ಡಿಸೆಂಬರ್ 1975ರ ಮೂಲಕ ಸೇರಿಸಲಾಗಿದೆ.

(ಬಿ) ಇತರ ಯಾವುದೇ ಸರ್ಕಾರಕ್ಕೆ ಪ್ರತಿನಿಯೋಜನೆ ಮೇಲೆ ಅನ್ಯ ಸೇವೆಯ ಮೇಲಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ ಮಾತ್ರ ಇಲಾಖೆಯ ಯಾವ ಕೇಡರ್‌ನಲ್ಲಿ ಅಂಥ ಸರ್ಕಾರಿ ನೌಕರನು ಇರುವನೋ ಆ ಮಾತ್ರ ಇಲಾಖೆ ಅಥವಾ ಸರ್ಕಾರದ ಯಾವ ಆಡಳಿತ ಇಲಾಖೆಗೆ ಆ ಕೇಡರಿನ ಸದಸ್ಯನಾಗಿ ಆತನು ಆಡಳಿತಾತ್ಮಕವಾಗಿ ಅಧೀನನಾಗಿರುವನೋ ಆ ಆಡಳಿತ ಇಲಾಖೆ.

[1][**23ಎ. ಭಾರತದ ಹೊರಗೆ ಇರುವ ಸ್ಥಿರ ಸ್ವತ್ತನ್ನು ಆರ್ಜಿಸುವುದಕ್ಕೆ ಮತ್ತು ವಿಲೇ ಮಾಡುವುದಕ್ಕೆ ಮತ್ತು ವಿದೇಶಿಯರು, ಮುಂತಾದವರೊಂದಿಗೆ ವ್ಯವಹಾರಗಳನ್ನು ನಡೆಸುವುದಕ್ಕೆ ಸಂಬಂಧಿಸಿದಂತೆ ನಿರ್ಬಂಧಗಳು.–** 23ನೇ ನಿಯಮದ (2)ನೇ ಉಪನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಯಾರೇ ಸರ್ಕಾರಿ ನೌಕರನು ನಿಯಮಿಸಿದ ಪ್ರಾಧಿಕಾರದ ಪೂರ್ವ ಮಂಜೂರಾತಿ ಪಡೆದ ಹೊರತು,–

(ಎ) ತನ್ನ ಹೆಸರಿನಲ್ಲಿ ಅಥವಾ ತನ್ನ ಕುಟುಂಬದ ಯಾರೇ ಸದಸ್ಯರ ಹೆಸರಿನಲ್ಲಿ ಭಾರತದ ಹೊರಗೆ ಇರುವ ಯಾವುದೇ ಸ್ಥಿರ ಸ್ವತ್ತನ್ನು ಖರೀದಿಯ, ಅಡಮಾನದ, ಗುತ್ತಿಗೆಯ, ದಾನದ ಮೂಲಕ ಅಥವಾ ಅನ್ಯಥಾ ಆರ್ಜಿಸತಕ್ಕದ್ದಲ್ಲ.

(ಬಿ) ತನ್ನ ಹೆಸರಿನಲ್ಲಿ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನ ಹೆಸರಿನಲ್ಲಿ, ತಾನು ಆರ್ಜಿಸಿದ ಅಥವಾ ಧಾರಣ ಮಾಡಿದ, ಭಾರತದ ಹೊರಗಿರುವ ಯಾವುದೇ ಸ್ಥಿರಸ್ವತ್ತನ್ನು ಮಾರಾಟದ, ಅಡಮಾನದ, ದಾನದ ಮೂಲಕ ಅಥವಾ ಅನ್ಯಥಾ ವಿಲೇ ಮಾಡತಕ್ಕದ್ದಲ್ಲ ಅಥವಾ ಅವುಗಳ ಸಂಬಂಧದಲ್ಲಿ ಯಾವುದೇ ಗುತ್ತಿಗೆಯನ್ನು ನೀಡತಕ್ಕದ್ದಲ್ಲ.

(ಸಿ) (i) ಯಾವುದೇ ಸ್ಥಿರ ಸ್ವತ್ತನ್ನು ತನ್ನ ಹೆಸರಿನಲ್ಲಿ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನ ಹೆಸರಿನಲ್ಲಿ ಖರೀದಿಯ, ಅಡಮಾನದ, ದಾನದ ಮೂಲಕ ಅಥವಾ ಅನ್ಯಥಾ ಆರ್ಜಿಸಲು;

(ii) ತನ್ನ ಹೆಸರಿನಲ್ಲಿ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನ ಹೆಸರಿನಲ್ಲಿ ಆರ್ಜಿಸಿದ ಅಥವಾ ಧಾರಣ ಮಾಡಿದ ಯಾವುದೇ ಸ್ಥಿರಸ್ವತ್ತನ್ನು ಮಾರಾಟದ, ಅಡಮಾನದ, ದಾನದ ಮೂಲಕ ಅಥವಾ ಅನ್ಯಥಾ ವಿಲೇ ಮಾಡಲು ಅಥವಾ ಅವುಗಳ ಸಂಬಂಧದಲ್ಲಿ ಯಾವುದೇ ಗುತ್ತಿಗೆಯನ್ನು ನೀಡಲು

– ಯಾರೇ ವಿದೇಶೀಯನೊಂದಿಗೆ, ವಿದೇಶೀ ಸರ್ಕಾರದೊಂದಿಗೆ, ವಿದೇಶೀ ಸಂಘಟನೆಯೊಂದಿಗೆ ಅಥವಾ ಸಂಸ್ಥೆಯೊಂದಿಗೆ ಯಾವುದೇ ವ್ಯವಹಾರವನ್ನು ನಡೆಸತಕ್ಕದ್ದಲ್ಲ.

**ವಿವರಣೆ:–** ಈ ನಿಯಮದಲ್ಲಿ 'ನಿಯಮಿಸಿದ ಪ್ರಾಧಿಕಾರ' ಎಂಬುದು 23ನೇ ನಿಯಮದಲ್ಲಿರುವಂಥ ಅರ್ಥವನ್ನೇ ಹೊಂದಿರುತ್ತದೆ.][1]

1. ಅಧಿಸೂಚನೆ ಸಂ. ಜಿಎಡಿ 1 ಎಸ್‌ಆರ್‌ಸಿ 75, ದಿನಾಂಕ 6ನೇ ಅಕ್ಟೋಬರ್ 1975 ಕೆಜಿಡಿ 23ನೇ ಅಕ್ಟೋಬರ್ 1975ರ ಮೂಲಕ ಸೇರಿಸಲಾಗಿದೆ.

**24. ಸರ್ಕಾರಿ ನೌಕರರ ಕೃತ್ಯಗಳ ಮತ್ತು ನಡತೆಯ ಸಮರ್ಥನೆ.–** (1) ಯಾರೇ ಸರ್ಕಾರಿ ನೌಕರನು ಸರ್ಕಾರದ ಪೂರ್ವ ಮಂಜೂರಾತಿ ಪಡೆದ ಹೊರತು ಯಾವ ಅಧಿಕೃತ ಕೃತ್ಯವು ಪ್ರತಿಕೂಲ ಟೀಕೆಯ ಅಥವಾ ಮಾನಹಾನಿ ಸ್ವರೂಪದ ನಿಂದನೆಯ ವಸ್ತು ವಿಷಯವಾಗಿರುವುದೋ ಆ ಯಾವುದೇ ಅಧಿಕೃತ ಕೃತ್ಯದ ಸಮರ್ಥನೆಗಾಗಿ ಯಾವುದೇ ನ್ಯಾಯಾಲಯಕ್ಕೆ ಅಥವಾ ಪತ್ರಿಕೆಗೆ ಮೊರೆಹೋಗತಕ್ಕದ್ದಲ್ಲ.

(2) ಈ ನಿಯಮದಲ್ಲಿರುವುದು ಯಾವುದೂ, ಸರ್ಕಾರಿ ನೌಕರನು ತನ್ನ ಖಾಸಗಿ ಚಾರಿತ್ರ್ಯವನ್ನು ಅಥವಾ ಖಾಸಗಿ ವ್ಯಕ್ತಿಯಾಗಿ ತಾನು ಮಾಡಿದ ಯಾವುದೇ ಕೃತ್ಯವನ್ನು ಸಮರ್ಥಿಸಿಕೊಳ್ಳುವುದನ್ನು ನಿಷೇಧಿಸುತ್ತದೆ ಎಂದು ಭಾವಿಸತಕ್ಕದ್ದಲ್ಲ ಮತ್ತು ಆತನ ಖಾಸಗಿ ಚಾರಿತ್ರ್ಯವನ್ನು ಅಥವಾ ಖಾಸಗಿ ವ್ಯಕ್ತಿಯಾಗಿ ಆತನು ಮಾಡಿದ ಯಾವುದೇ ಕೃತ್ಯವನ್ನು ಸಮರ್ಥಿಸಿಕೊಳ್ಳುವುದಕ್ಕಾಗಿ ಕ್ರಮವನ್ನು ಕೈಗೊಂಡಿರುವಲ್ಲಿ ಸರ್ಕಾರಿ ನೌಕರನು ಅಂಥ ಕ್ರಮ ಕುರಿತಂತೆ ನಿಯಮಿಸಿದ ಪ್ರಾಧಿಕಾರಿಗೆ ಒಂದು ವರದಿಯನ್ನು ಸಲ್ಲಿಸತಕ್ಕದ್ದು.

**25. ಅಪ್ರಾಪ್ತವಯಸ್ಕರ ಪಾಲನೆ.–** ಸರ್ಕಾರಿ ನೌಕರನು, ನಿಯಮಿಸಿದ ಪ್ರಾಧಿಕಾರದ ಪೂರ್ವ ಮಂಜೂರಾತಿ ಪಡೆಯದೆ, ತನ್ನ ಅವಲಂಬಿತನನ್ನು ಹೊರತುಪಡಿಸಿ ಇತರ ಅಪ್ರಾಪ್ತ ವಯಸ್ಕನ ಶರೀರದ ಅಥವಾ ಸ್ವತ್ತಿನ ಕಾನೂನು ಪಾಲಕನಂತೆ ಕಾರ್ಯನಿರ್ವಹಿಸತಕ್ಕದ್ದಲ್ಲ.

**ವಿವರಣೆ:–** ಈ ನಿಯಮದ ಉದ್ದೇಶಕ್ಕಾಗಿ ಅವಲಂಬಿತ ಎಂದರೆ ಸರ್ಕಾರಿ ನೌಕರನ ಹೆಂಡತಿ, ಮಕ್ಕಳು ಮತ್ತು ಮಲಮಕ್ಕಳು ಮತ್ತು ಮೊಮ್ಮಕ್ಕಳು ಎಂದು ಅರ್ಥ ಮತ್ತು ಅದರಲ್ಲಿ ಅವನೊಂದಿಗೆ ವಾಸಿಸುತ್ತಿರುವ ಮತ್ತು ಅವನ ಮೇಲೆ ಸಂಪೂರ್ಣವಾಗಿ ಅವಲಂಬಿತರಾಗಿರುವ, ಅವನ ಸಹೋದರಿಯರು, ಸಹೋದರರು, ಸಹೋದರರ ಮಕ್ಕಳು ಮತ್ತು ಸಹೋದರಿಯರ ಮಕ್ಕಳೂ ಸಹ ಒಳಗೊಳ್ಳುತ್ತಾರೆ.

**26. ಸರ್ಕಾರೇತರ ಅಥವಾ ಇತರ ಪ್ರಭಾವವನ್ನು ಬೀರುವುದು.–** ಯಾರೇ ಸರ್ಕಾರಿ ನೌಕರನು ಸರ್ಕಾರದ ಅಧೀನದಲ್ಲಿ ತನ್ನ ಸೇವೆಗೆ ಸಂಬಂಧಿಸಿದ ವಿಷಯಗಳ ಸಂಬಂಧದಲ್ಲಿ ಅವನ ಹಿತಾಸಕ್ತಿಗಳನ್ನು ಸಾಧಿಸಿಕೊಳ್ಳಲು ಯಾರೇ ವರಿಷ್ಠ ಅಧಿಕಾರಿಯ ಮೇಲೆ ಯಾವುದೇ ರಾಜಕೀಯ ಅಥವಾ ಇತರ ಪ್ರಭಾವವನ್ನು ತರತಕ್ಕದ್ದಲ್ಲ ಅಥವಾ ತರಲು ಪ್ರಯತ್ನಿಸತಕ್ಕದ್ದಲ್ಲ.

**27. ಸರ್ಕಾರಿ ನೌಕರನ ವೈಯಕ್ತಿಕ ಮನವಿಗಳು.–** ಸರ್ಕಾರಿ ನೌಕರನು ಯಾವುದೇ ಮನವಿಯನ್ನು ತನ್ನ ಮೇಲಧಿಕಾರಿಯ ಮೂಲಕ ಮಾತ್ರ ಸಲ್ಲಿಸತಕ್ಕದ್ದು ಮತ್ತು ಅದನ್ನು ಸರ್ಕಾರಕ್ಕೆ ಸಂಬೋಧಿಸಿದಾಗಲೆಲ್ಲಾ ಅದರ ಮುಂಗಡ ಪ್ರತಿಯನ್ನು ಸಂಬಂಧಪಟ್ಟ ಇಲಾಖೆಯ ಸರ್ಕಾರದ ಕಾರ್ಯದರ್ಶಿಯವರಿಗೆ ಮಾತ್ರ ಸಲ್ಲಿಸತಕ್ಕದ್ದು, ಆದರೆ ಆ ಇಲಾಖೆಯ ಪ್ರಭಾರದಲ್ಲಿರುವ ಸಚಿವರಿಗೆ ಅಲ್ಲ:

[1][ಪರಂತು, ಸರ್ಕಾರಿ ನೌಕರನಿಗೆ ಕೆಳಗಿನ ಅಧಿಕಾರಿಗಳ ಗಮನ ಸೆಳೆಯಲು ಅಥವಾ ಅವರಿಂದ ಪರಿಹಾರ ಪಡೆಯಲು ಬಳಸಿದ ಎಲ್ಲ ಅವಕಾಶಗಳು ಮುಗಿದಾಗ ಅಥವಾ ಮೂರು ತಿಂಗಳ ಅವಧಿಯೊಳಗಾಗಿ ಅವನ ಮನವಿಗೆ ಉತ್ತರ ಬಾರದಿದ್ದರೆ, ಅವನು ತನ್ನ ಮನವಿಯ ಒಂದು ಮುಂಗಡ ಪ್ರತಿಯನ್ನು ಸಂಬಂಧಪಟ್ಟ ಸಚಿವರಿಗೆ ಸಲ್ಲಿಸಬಹುದು.][1]

1. ಅಧಿಸೂಚನೆ ಸಂಖ್ಯೆ ಜಿಎಡಿ 4 ಎಸ್‌ಆರ್‌ಸಿ 75 ದಿನಾಂಕ 28ನೇ ಅಕ್ಟೋಬರ್ 1975ರ ಕೆಜಿಡಿ 6ನೇ ನವೆಂಬರ್ 1975ರ ಮೂಲಕ ಸೇರಿಸಲಾಗಿದೆ.

**28. ದ್ವಿಪತ್ನಿ ವಿವಾಹ.–** (1) ಯಾರೇ ಸರ್ಕಾರಿ ನೌಕರನಿಗೆ ಈಗಾಗಲೇ ಜೀವಂತ ಪತ್ನಿ ಇರುವಾಗ ತತ್ಕಾಲದಲ್ಲಿ ಅವನಿಗೆ ಅನ್ವಯವಾಗುವ ವೈಯಕ್ತಿಕ ಕಾನೂನಿನ ಅಡಿಯಲ್ಲಿ ಎರಡನೇ ವಿವಾಹವಾಗಲು ಅನುಮತಿ ಇದ್ದಾಗ್ಯೂ, ಆತನು ಮೊದಲು ಸರ್ಕಾರದ ಅನುಮತಿಯನ್ನು ಪಡೆಯದೆ ಇನ್ನೊಂದು ವಿವಾಹವನ್ನು ಮಾಡಿಕೊಳ್ಳತಕ್ಕದ್ದಲ್ಲ.

(2) ಯಾರೇ ಮಹಿಳಾ ಸರ್ಕಾರಿ ನೌಕರಳು ಮೊದಲು ಸರ್ಕಾರದ ಅನುಮತಿಯನ್ನು ಪಡೆಯದೆ ಜೀವಂತ ಪತ್ನಿಯನ್ನು ಹೊಂದಿರುವ ವ್ಯಕ್ತಿಯನ್ನು ವಿವಾಹವಾಗತಕ್ಕದ್ದಲ್ಲ.

[1][28ಎ] XXX][1]

1. ಅಧಿಸೂಚನೆ ಸಂಖ್ಯೆ ಡಿಪಿಎಆರ್ 21 ಎಸ್‌ಆರ್‌ಸಿ 76 ದಿನಾಂಕ 15–1–1977 ರ ಮೂಲಕ 28ಎ ಪ್ರಕರಣವನ್ನು ಸೇರಿಸಲಾಗಿತ್ತು ಮತ್ತು ಅಧಿಸೂಚನೆ ಸಂಖ್ಯೆ ಡಿಪಿಎಆರ್ 14 ಎಸ್‌ಆರ್‌ಸಿ 77, ದಿನಾಂಕ 8–11–1977ರ ಮೂಲಕ 28ಎ ಪ್ರಕರಣವನ್ನು ಬಿಟ್ಟುಬಿಡಲಾಗಿದೆ.

**29. ಮಾದಕ ಪೇಯಗಳು ಮತ್ತು ಮಾದಕ ವಸ್ತುಗಳ ಸೇವನೆ.–** ಸರ್ಕಾರಿ ನೌಕರನು,–

(ಎ) ತಾನು ತತ್ಕಾಲದಲ್ಲಿ ಇರುವ ಯಾವುದೇ ಪ್ರದೇಶದಲ್ಲಿ ಮಾದಕ ಪೇಯಗಳಿಗೆ ಅಥವಾ ಮಾದಕ ವಸ್ತುಗಳಿಗೆ ಸಂಬಂಧಪಟ್ಟ ಜಾರಿಯಲ್ಲಿರುವ ಯಾವುದೇ ಕಾನೂನನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

(ಬಿ) ಯಾವುದೇ ಮಾದಕ ಪೇಯದ ಅಥವಾ ಮಾದಕ ವಸ್ತುಗಳ ಪ್ರಭಾವದಿಂದ ಯಾವುದೇ ರೀತಿಯಲ್ಲಿ ತನ್ನ ಕರ್ತವ್ಯಗಳ ಪಾಲನೆಗೆ ಧಕ್ಕೆ ಉಂಟಾಗುವುದಿಲ್ಲವೆಂಬುದರ ಬಗ್ಗೆ ಸೂಕ್ತ ಎಚ್ಚರಿಕೆ ವಹಿಸತಕ್ಕದ್ದು.

[1][(ಬಿಬಿ)ಸಾರ್ವಜನಿಕ ಸ್ಥಳದಲ್ಲಿ ಯಾವುದೇ ಮಾದಕ ಪೇಯವನ್ನು ಅಥವಾ ಮಾದಕ ವಸ್ತುವನ್ನು ಸೇವಿಸತಕ್ಕದ್ದಲ್ಲ][1]

1. ಅಧಿಸೂಚನೆ ಸಂಖ್ಯೆ ಜಿಎಡಿ 1 ಎಸ್‌ಆರ್‌ಸಿ 75, ದಿನಾಂಕ 6ನೇ ಅಕ್ಟೋಬರ್ 1975 ಕೆಜಿಡಿ 25ನೇ ಅಕ್ಟೋಬರ್ 1976ರ ಮೂಲಕ ಪ್ರತಿಯೋಜಿಸಲಾಗಿದೆ.

(ಸಿ) ಕುಡಿದು ಮತ್ತೇರಿದ ಸ್ಥಿತಿಯಲ್ಲಿ ಸಾರ್ವಜನಿಕ ಸ್ಥಳದಲ್ಲಿ ಕಾಣಿಸಿಕೊಳ್ಳತಕ್ಕದ್ದಲ್ಲ;

(ಡಿ) ರೂಢಿಗತವಾಗಿ ಯಾವುದೇ ಮಾದಕ ಪೇಯವನ್ನು ಅಥವಾ ಮಾದಕ ವಸ್ತುವನ್ನು ಅತಿಯಾಗಿ ಸೇವನೆ ಮಾಡತಕ್ಕದ್ದಲ್ಲ.

[1][**ವಿವರಣೆ.**– ಈ ನಿಯಮದ ಉದ್ದೇಶಕ್ಕಾಗಿ 'ಸಾರ್ವಜನಿಕ ಸ್ಥಳ', ಎಂದರೆ ಹಣ ಪಾವತಿ ಮಾಡಿ ಅಥವಾ ಅನ್ಯಥಾ ಸಾರ್ವಜನಿಕರಿಗೆ (ವಾಹನವೂ ಸೇರಿದಂತೆ) ಪ್ರವೇಶಾವಕಾಶವಿರುವ ಅಥವಾ ಪ್ರವೇಶವನ್ನು ಅನುಮತಿಸಲಾಗಿರುವ ಯಾವುದೇ ಸಾರ್ವಜನಿಕ ಸ್ಥಳ ಅಥವಾ ಆವರಣಗಳು ಎಂದು ಅರ್ಥ].

1. ಅಧಿಸೂಚನೆ ಸಂಖ್ಯೆ ಜಿಎಡಿ 1 ಎಸ್‌ಆರ್‌ಸಿ 75, ದಿನಾಂಕ 6ನೇ ಅಕ್ಟೋಬರ್ 1975 ಕೆಜಿಡಿ 25ನೇ ಅಕ್ಟೋಬರ್ 1976ರ ಮೂಲಕ ಪ್ರತಿಯೋಜಿಸಲಾಗಿದೆ.

[1][**29ಎ. ಮಕ್ಕಳ ನಿಯೋಜನೆ.**– (1) ಯಾರೇ ಸರ್ಕಾರಿ ನೌಕರನು ಗೃಹ ಕೃತ್ಯದಲ್ಲಿ ಸಹಾಯ ಮಾಡುವುದಕ್ಕಾಗಿ ಹದಿನಾಲ್ಕು ವರ್ಷಕ್ಕಿಂತ ಕಡಿಮೆ ವಯಸ್ಸಿನ ಯಾವುದೇ ಮಗುವನ್ನು ಕೆಲಸಕ್ಕೆ ಇಟ್ಟುಕೊಳ್ಳತಕ್ಕದ್ದಲ್ಲ;

(2) ಯಾರೇ ಸರ್ಕಾರಿ ನೌಕರನು (1)ನೇ ಉಪನಿಯಮವನ್ನು ಉಲ್ಲಂಘನೆ ಮಾಡುವುದು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 8ನೇ ನಿಯಮದ (v) ರಿಂದ (viii)ರ ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ದಂಡನೆಗಳಿಗೆ ಒಳಪಡುವ ದುರ್ನಡತೆ ಎನಿಸಿಕೊಳ್ಳುತ್ತದೆ.][1]

1. ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್‌ಆರ್‌ಸಿ 97, ದಿನಾಂಕ 11ನೇ ನವೆಂಬರ್ 1997 ಕೆಜಿಡಿ 19ನೇ ನವೆಂಬರ್ 1976ರ ಮೂಲಕ ಸೇರಿಸಲಾಗಿದೆ.

[1][**29ಬಿ. ಲೈಂಗಿಕ ಕಿರುಕುಳದ ನಿಷೇಧ.**– ಯಾರೇ ಸರ್ಕಾರಿ ನೌಕರನು ಕೆಲಸದ ಸ್ಥಳಗಳಲ್ಲಿ ಯಾರೇ ಮಹಿಳಾ ಸರ್ಕಾರಿ ನೌಕರಳನ್ನು ಲೈಂಗಿಕ ಕಿರುಕುಳಕ್ಕೆ ಒಳಪಡಿಸತಕ್ಕದ್ದಲ್ಲ.

**ವಿವರಣೆ.**– ಈ ನಿಯಮದ ಉದ್ದೇಶಕ್ಕಾಗಿ "ಲೈಂಗಿಕ ಕಿರುಕುಳ" ಎಂಬುದು (ನೇರವಾದ ಅಥವಾ ಸೂಚ್ಯವಾದ) ಇಷ್ಟವಾಗದ ಲೈಂಗಿಕ ಉದ್ದೇಶವುಳ್ಳ ನಡತೆಯನ್ನು, ಎಂದರೆ,–

(ಎ) ಮೈಮುಟ್ಟುವುದು ಮತ್ತು ಒಲಿಸಿಕೊಳ್ಳಲು ಪ್ರಯತ್ನಿಸುವುದನ್ನು;

(ಬಿ) ಲೈಂಗಿಕ ಅನುಗ್ರಹಕ್ಕಾಗಿ ಒತ್ತಾಯ ಮಾಡುವುದನ್ನು ಅಥವಾ ಬೇಡಿಕೊಳ್ಳುವುದನ್ನು;

(ಸಿ) ಲೈಂಗಿಕ ವರ್ಣನೆಯ ಮಾತುಗಳನ್ನಾಡುವುದನ್ನು;

(ಡಿ) ಅಶ್ಲೀಲ ಸಾಹಿತ್ಯ, ಚಿತ್ರಗಳನ್ನು ತೋರಿಸುವುದನ್ನು ಅಥವಾ;

(ಇ) ಯಾವುದೇ ಇತರ ಇಷ್ಟವಾಗದ ಲೈಂಗಿಕ ಸ್ವರೂಪದ ದೈಹಿಕ, ಮೌಖಿಕ ಅಥವಾ ಆಂಗಿಕ ವರ್ತನೆಯನ್ನು

– ಒಳಗೊಳ್ಳುತ್ತದೆ.][1]

1. ಅಧಿಸೂಚನೆ ಸಂಖ್ಯೆ ಡಿಪಿಎಆರ್ 14 ಎಸ್‌ಆರ್‌ಸಿ 97, ದಿನಾಂಕ 17ನೇ ಜೂನ್ 1998 ಕೆಜಿಡಿ 26ನೇ ಜೂನ್ 1998ರ ಮೂಲಕ ಸೇರಿಸಲಾಗಿದೆ.

[1][**29ಸಿ. ಗಂಡ/ ಹೆಂಡತಿಯ ಮತ್ತು ಮಕ್ಕಳ ಪಾಲನೆ.**– ಯಾರೇ ಸರ್ಕಾರಿ ನೌಕರನು/ಳು ಅವನ ಹೆಂಡತಿಯ ಅಥವಾ ಅವಳ ಗಂಡನ ಮತ್ತು ಮಕ್ಕಳ ಆಹಾರ, ಬಟ್ಟೆ, ವಸತಿ ಮತ್ತು ಶಿಕ್ಷಣ, ಮುಂತಾದವುಗಳಂಥ ಮೂಲ ಅವಶ್ಯಕತೆಗಳ ಬಗ್ಗೆ ಕಾಳಜಿ ವಹಿಸಲು ನಿರ್ಲಕ್ಷಿಸತಕ್ಕದ್ದಲ್ಲ.][1]

1. ಅಧಿಸೂಚನೆ ಸಂಖ್ಯೆ ಡಿಪಿಎಆರ್ 6 ಎಸ್‌ಆರ್‌ಸಿ 2002 ದಿನಾಂಕ 5.2.2004ರ ಮೂಲಕ ಸೇರಿಸಲಾಗಿದೆ.

**30. ಅರ್ಥ ವಿವರಣೆ.**–ಈ ನಿಯಮಗಳ ಅರ್ಥ ವಿವರಣೆಗೆ ಸಂಬಂಧಪಟ್ಟಂತೆ ಯಾವುದೇ ಪ್ರಶ್ನೆ ಉದ್ಭವಿಸಿದರೆ ಅದನ್ನು ಸರ್ಕಾರಕ್ಕೆ ಉಲ್ಲೇಖಿಸತಕ್ಕದ್ದು, ಆ ಬಗ್ಗೆ ಅದರ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

**31. ಅಧಿಕಾರಗಳ ಪ್ರತ್ಯಾಯೋಜನೆ.**– ಸರ್ಕಾರವು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಈ ನಿಯಮಗಳ ಮೇರೆಗೆ ತಾನು ಅಥವಾ ಯಾರೇ ಇಲಾಖಾ ಮುಖ್ಯಸ್ಥರು ಚಲಾಯಿಸಬಹುದಾದ ಯಾವುದೇ ಅಧಿಕಾರವು (30ನೇ ನಿಯಮದ ಮತ್ತು ಈ ನಿಯಮದ ಮೇರೆಗಿನ ಅಧಿಕಾರವನ್ನು ಹೊರತುಪಡಿಸಿ) ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಷರತ್ತುಗಳು ಯಾವುವಾದರೂ ಇದ್ದರೆ, ಅವುಗಳಿಗೆ ಒಳಪಟ್ಟು, ಆ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅಧಿಕಾರಿಯು ಅಥವಾ ಪ್ರಾಧಿಕಾರವೂ ಸಹ ಚಲಾಯಿಸಬಹುದಾದುದು ಆಗಿರತಕ್ಕದ್ದೆಂದು ನಿರ್ದೇಶಿಸಬಹುದು.

**32. ನಿರಸನ ಮತ್ತು ಉಳಿಸುವಿಕೆಗಳು.**– ಈ ನಿಯಮಗಳ ಪ್ರಾರಂಭದ ನಿಕಟ ಪೂರ್ವದಲ್ಲಿ ಜಾರಿಯಲ್ಲಿದ್ದ ಈ ನಿಯಮಗಳಿಗೆ ಸಂವಾದಿಯಾದ ಮತ್ತು ಯಾವ ಸರ್ಕಾರಿ ನೌಕರನಿಗೆ ಈ ನಿಯಮಗಳು ಅನ್ವಯವಾಗುವುವೋ ಆ ಸರ್ಕಾರಿ ನೌಕರನಿಗೆ ಅನ್ವಯವಾಗುವ ಆ ಯಾವುವೇ ನಿಯಮಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, ಹಾಗೆ ನಿರಸನಗೊಳಿಸಲಾದ ನಿಯಮಗಳ ಮೇರೆಗೆ ಮಾಡಿದ ಯಾವುದೇ ಆದೇಶವನ್ನು ಅಥವಾ ಕೈಗೊಂಡ ಯಾವುದೇ ಕ್ರಮವನ್ನು ಈ ನಿಯಮಗಳ ಸಂವಾದಿ ಉಪಬಂಧಗಳ ಮೇರೆಗೆ ಮಾಡಿರುವುದಾಗಿ ಅಥವಾ ಕೈಗೊಂಡಿರುವುದಾಗಿ ಭಾವಿಸತಕ್ಕದ್ದು.

[ಸಂ.ಜಿಎಡಿ 14 ಎಸ್‌ಎಸ್‌ಆರ್ 66]

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಬ್ಲ್ಯೂ.ಎ. ಸ್ಮಿತ್,**

ಅಧೀನ ಕಾರ್ಯದರ್ಶಿ.

**ಮೈಸೂರು ಸರ್ಕಾರ**

**ಅಧಿಸೂಚನೆ**

**ಸಂ:ಜಿಎಡಿ 96 ಎಸ್‌ಎಸ್‌ಆರ್ 66, ಬೆಂಗಳೂರು, ದಿನಾಂಕ 15–9–1966.**

ಮೈಸೂರು ರಾಜ್ಯಪಾಲರು, ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಮತ್ತು ಈ ಬಗ್ಗೆ ಅವರನ್ನು ಶಕ್ತಗೊಳಿಸುವ ಇತರ ಎಲ್ಲಾ ಅಧಿಕಾರಗಳನ್ನು ಚಲಾಯಿಸಿ ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಮೈಸೂರು ಸಿವಿಲ್ ಸೇವಾ ನಿಯಮಗಳು (ನಡತೆ) ತಿದ್ದುಪಡಿ ನಿಯಮಗಳು, 1966 ಎಂದು ಕರೆಯತಕ್ಕದ್ದು.

(2) ಅವು ಕೂಡಲೇ ಜಾರಿಗೆ ಬರತಕ್ಕದ್ದು.

**2. ನಿಯಮ 8ರ ತಿದ್ದುಪಡಿ.– ಮೈಸೂರು** ಸಿವಿಲ್ ಸೇವಾ (ನಡತೆ) ತಿದ್ದುಪಡಿ ನಿಯಮಗಳು, 1966ರ ನಿಯಮ 8 ರಲ್ಲಿ,–

(1) **(ii)** ನೇ ಖಂಡಕ್ಕೆ ಬದಲಾಗಿ ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:–

"**(ii)** ಎಷ್ಟೇ ಸಂಖ್ಯೆಯ ಸರ್ಕಾರಿ ನೌಕರರೊಡನೆ ಸೇರಿ ಯಾವುದೇ ಬಗೆಯ ಮುಷ್ಕರಕ್ಕೆ ತೊಡಗತಕ್ಕದ್ದಲ್ಲ ಅಥವಾ ಯಾವುದೇ ರೀತಿಯಲ್ಲಿ ಅದಕ್ಕೆ ಪ್ರೇರೇಪಣೆ ಮಾಡತಕ್ಕದ್ದಲ್ಲ, ಪ್ರಚೋದನೆ ಮಾಡತಕ್ಕದ್ದಲ್ಲ ಅಥವಾ ದುಷ್ಪ್ರೇರಣೆ ಮಾಡತಕ್ಕದ್ದಲ್ಲ."

(2) ನಿಯಮದ ಕೊನೆಯಲ್ಲಿ, ಮುಂದಿನ ವಿವರಣೆಯನ್ನು ಸೇರಿಸತಕ್ಕದ್ದು, ಎಂದರೆ:–

**ವಿವರಣೆ:–** ಈ ನಿಯಮದ ಉದ್ದೇಶಗಳಿಗಾಗಿ "ಮುಷ್ಕರ" ಎಂದರೆ (ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗುವುದೂ ಸೇರಿದಂತೆ) ಸರ್ಕಾರಿ ನೌಕರರ ಒಂದು ಗುಂಪು ಒಟ್ಟಾಗಿ ಸೇರಿಕೊಂಡು ಕೆಲಸ ಮಾಡುವುದನ್ನು ನಿಲ್ಲಿಸುವುದು ಅಥವಾ ಎಷ್ಟೇ ಸಂಖ್ಯೆಯ ಸರ್ಕಾರಿ ನೌಕರರು ಒಟ್ಟಾಗಿ ಸೇರಿ ಅಥವಾ ತಮ್ಮ ತಮ್ಮಲ್ಲೇ ಮಾತನಾಡಿಕೊಂಡು ಕೆಲಸ ಮಾಡಲು ನಿರಾಕರಿಸುವುದು ಎಂದು ಅರ್ಥ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ತಿಪ್ಪಾಜಿರಾವ್,**

ಸರ್ಕಾರದ ಉಪ ಕಾರ್ಯದರ್ಶಿ,

ಸಾಮಾನ್ಯ ಆಡಳಿತ ಇಲಾಖೆ (ಸೇವೆಗಳು).

**ಮೈಸೂರು ಸರ್ಕಾರ**

**ಅಧಿಕೃತ ಜ್ಞಾಪನ**

**ಸಂ: ಜಿಎಡಿ 9 ಎಸ್‌ಎಸ್‌ಆರ್ 67, ಬೆಂಗಳೂರು, ದಿನಾಂಕ 18–12–1967**

**ವಿಷಯ :** ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು–ಸರ್ಕಾರಿ ನೌಕರರು ಆರ್ಜಿಸಿದ ಅಥವಾ ಹೊಂದಿರುವ ಚರ, ಸ್ಥಿರ ಮತ್ತು ಬೆಲೆಬಾಳುವ ಆಸ್ತಿಗಳಿಗೆ ಸಂಬಂಧಪಟ್ಟಂತೆ ವಿವರಪಟ್ಟಿಕೆ

ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 23ನೇ ನಿಯಮದ (1)ನೇ ಉಪನಿಯಮದ ಮೇರೆಗೆ ಪ್ರತಿಯೊಬ್ಬ ಸರ್ಕಾರಿ ನೌಕರನು, ಯಾವುದೇ ಸೇವೆಗೆ ಅಥವಾ ಹುದ್ದೆಗೆ ಮೊದಲು ನೇಮಕಗೊಂಡಾಗ ಮತ್ತು ಆ ತರುವಾಯ ಪ್ರತಿ 12 ತಿಂಗಳಿಗೊಮ್ಮೆ ಆತನ ಆಸ್ತಿಗಳು ಮತ್ತು ಹೊಣೆಗಾರಿಕೆಗಳ ಬಗ್ಗೆ ನಿಯಮಿಸಬಹುದಾದಂಥ ನಮೂನೆಯಲ್ಲಿ:–

(ಎ) ತನಗೆ ಪಿತ್ರಾರ್ಜಿತವಾಗಿ ಬಂದ ಅಥವಾ ತಾನು ಒಡೆತನ ಹೊಂದಿರುವ ಅಥವಾ ಆರ್ಜಿಸಿದ ಅಥವಾ ತನ್ನ ಸ್ವಂತ ಹೆಸರಿನಲ್ಲಾಗಲೀ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನ ಹೆಸರಿನಲ್ಲಾಗಲೀ ಅಥವಾ ಇತರ ಯಾರೇ ವ್ಯಕ್ತಿಯ ಹೆಸರಿನಲ್ಲಾಗಲೀ, ಗುತ್ತಿಗೆ ಅಥವಾ ಅಡಮಾನದ ಮೇಲೆ ಅವನು ಹೊಂದಿರುವ ಸ್ಥಿರಸ್ವತ್ತು;

(ಬಿ) ತನಗೆ ಪಿತ್ರಾರ್ಜಿತವಾಗಿ ಬಂದ ಅಥವಾ ಅದೇ ರೀತಿ ಅವನು ಒಡೆತನ ಹೊಂದಿದ, ಆರ್ಜಿಸಿದ ಅಥವಾ ಹೊಂದಿದ ಷೇರುಗಳು, ಡಿಬೆಂಚರುಗಳು ಮತ್ತು ಬ್ಯಾಂಕ್ ಠೇವಣಿಗಳೂ ಸೇರಿದಂತೆ ನಗದು;

(ಸಿ) ತನಗೆ ಪಿತ್ರಾರ್ಜಿತವಾಗಿ ಬಂದ ಅಥವಾ ಅದೇ ರೀತಿ ಅವನು ಒಡೆತನ ಹೊಂದಿದ, ಆರ್ಜಿಸಿದ ಅಥವಾ ಹೊಂದಿದ ಇತರ ಚರ ಸ್ವತ್ತು;

(ಡಿ) ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಅವನು ಮಾಡಿಕೊಂಡ ಸಾಲಗಳು ಅಥವಾ ಹೊತ್ತಿರುವ ಇತರ ಹೊಣೆಗಾರಿಕೆಗಳು

–ಇವುಗಳನ್ನು ಕುರಿತು ಪೂರ್ಣ ವಿವರಗಳನ್ನು ನೀಡಿ ವಿವರ ಪಟ್ಟಿಕೆಯನ್ನು ಸಲ್ಲಿಸಲು ಅಗತ್ಯಪಡಿಸಲಾಗಿದೆ.

ವಿವರಪಟ್ಟಿಕೆಯನ್ನು ರಾಜ್ಯ ಸರ್ಕಾರದ ಗೆಜೆಟೆಡ್ ಮತ್ತು ನಾನ್–ಗೆಜೆಟೆಡ್ ಅಧಿಕಾರಿಗಳು ಮೊಹರು ಮಾಡಿದ ಪ್ರತ್ಯೇಕ ಲಕೋಟೆಗಳಲ್ಲಿ ಪ್ರತಿ ವರ್ಷದ ಜನವರಿ ತಿಂಗಳಲ್ಲಿ ಇದಕ್ಕೆ ಲಗತ್ತಿಸಲಾದ ನಮೂನೆಯಲ್ಲಿ ನಿಯಮಿಸಿದ ಪ್ರಾಧಿಕಾರಕ್ಕೆ/ ಸರ್ಕಾರಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ನಿರ್ದೇಶಿಸಲಾಗಿದೆ. ಹೊಸದಾಗಿ ಸೇರಿರುವವರ ಸಂಬಂಧದಲ್ಲಿ ವಿವರಪಟ್ಟಿಕೆಯನ್ನು ಅವರ ಮೊದಲ ನೇಮಕದ ಒಂದು ತಿಂಗಳೊಳಗೆ ಮತ್ತು ತರುವಾಯ ಪ್ರತಿವರ್ಷದ ಜನವರಿ ತಿಂಗಳಲ್ಲಿ ಸಲ್ಲಿಸತಕ್ಕದ್ದು.

ವಿವರಪಟ್ಟಿಕೆಗಳನ್ನು ರಹಸ್ಯವೆಂಬುದಾಗಿ ಪರಿಗಣಿಸತಕ್ಕದ್ದು ಮತ್ತು ಅವುಗಳನ್ನು ಸಂಬಂಧಪಟ್ಟ ಸರ್ಕಾರಿ ನೌಕರರ ರಹಸ್ಯ ವರದಿಗಳನ್ನು ಇಟ್ಟುಕೊಂಡು ಬರಲು ಯಾವ ಅಧಿಕಾರಿಗಳನ್ನು ಅಗತ್ಯಪಡಿಸಲಾಗಿದೆಯೋ ಆ ಅಧಿಕಾರಿಗಳ ಅಭಿರಕ್ಷೆಯಲ್ಲಿ ಇಡತಕ್ಕದ್ದು. ವಿವರಪಟ್ಟಿಕೆಗಳನ್ನು ರಹಸ್ಯ ವರದಿಯೊಂದಿಗೆ ಸಲ್ಲಿಸದೆ ಅವುಗಳನ್ನು ಪ್ರತ್ಯೇಕವಾಗಿ ಇಡತಕ್ಕದ್ದು.

**ಸರ್ಕಾರಿ ಆದೇಶ ಸಂಖ್ಯೆ ಜಿಎಡಿ 21 ಎಸ್‌ಆರ್‌ಸಿ 75, ದಿನಾಂಕ 14–11–1975ಕ್ಕೆ ಅನುಬಂಧ**

**(ಅಧಿಕೃತ ಜ್ಞಾಪನ ಪತ್ರ ಸಂ ಜಿಎಡಿ 9 ಎಸ್‌ಎಸ್‌ಆರ್ 67, ದಿನಾಂಕ 18–12–1967ರಲ್ಲಿ ನಿಯಮಿಸಲಾದ ನಮೂನೆಯ ಪ್ರತಿ)**

**ನಮೂನೆ**

19––––––––– ನೇ ವರ್ಷದ ಆಸ್ತಿಗಳ ಹಾಗೂ ಹೊಣೆಗಾರಿಕೆಗಳ ವಿವರ ಪತ್ರ

(ನಿಯಮ 23)

1. ಅಧಿಕಾರಿಯ ಹೆಸರು
2. ಈಗ ಧಾರಣ ಮಾಡಿರುವ ಹುದ್ದೆ
3. ಸರ್ಕಾರಿ ಸೇವೆಗೆ ಸೇರಿದ ದಿನಾಂಕ
4. ಈಗಿನ ವೇತನ
5. ಆಸ್ತಿಗಳು

(i) ಸ್ಥಿರ ಸ್ವತ್ತು:–
ಪಿತ್ರಾರ್ಜಿತವೇ ಅಥವಾ ಸ್ವಂತದ್ದೇ ಅಥವಾ ಗುತ್ತಿಗೆ ಅಥವಾ
ಅಡಮಾನದ ಮೇರೆಗೆ ಹೊಂದಲಾಗಿದೆಯೇ?

(ಎ) ಬಾಗಾಯ್ತು ಜಮೀನು ಮತ್ತು ಪ್ಲಾಂಟೇಷನ್ ಜಮೀನು,–

(i) ಯಾರ ಹೆಸರಿನಲ್ಲಿ ಹೊಂದಲಾಗಿದೆ.
(ಸ್ವಂತ ಹೆಸರಿನಲ್ಲಿ ಇಲ್ಲದಿದ್ದರೆ, ಯಾರ ಹೆಸರಿನಲ್ಲಿ ಹೊಂದಲಾಗಿದೆ ತಿಳಿಸಿ ಹಾಗೂ ಸರ್ಕಾರಿ ನೌಕರನೊಂದಿಗೆ ಆತನ ಅಥವಾ ಆಕೆಯ ಸಂಬಂಧ)

(ii) ಅದು ಇರುವ ಸ್ಥಳ

(ಜಿಲ್ಲೆ, ತಾಲೂಕು ಹಾಗೂ ಗ್ರಾಮ ಅಥವಾ ಪಟ್ಟಣ)

(iii) ಸರ್ವೇ ನಂಬರ್

(iv) ವಿಸ್ತೀರ್ಣ

(v) ಆದಾಯ

(vi) ಸಂದಾಯ ಮಾಡಿದ ಬೆಲೆ

(vii) ಅಂದಾಜು ಮೌಲ್ಯ

(viii) ಸ್ವಂತದ್ದಾದರೆ, ಅದನ್ನು ಹೇಗೆ ಆರ್ಜಿಸಲಾಗಿದೆ (ಖರೀದಿ, ದಾನ ಅಥವಾ ಪಿತ್ರಾರ್ಜಿತ)

ಅಥವಾ

ಗುತ್ತಿಗೆ ಅಥವಾ ಅಡಮಾನದ ಮೇಲೆ ಹೊಂದಿದ್ದರೆ, ಗುತ್ತಿಗೆ ಅಥವಾ ಅಡಮಾನದ ವಿವರಗಳು

(ಬಿ) ನೀರಿನ ಮೂಲವಿರುವ ಭೂಮಿ, ತರಿ ಅಥವಾ ನೀರಾವರಿ ಭೂಮಿ:–

(i) ಯಾರ ಹೆಸರಿನಲ್ಲಿ ಹೊಂದಲಾಗಿದೆ.
(ಸ್ವಂತ ಹೆಸರಿನಲ್ಲಿ ಇಲ್ಲದಿದ್ದರೆ, ಯಾರ ಹೆಸರಿನಲ್ಲಿ ಹೊಂದಲಾಗಿದೆ ತಿಳಿಸಿ ಮತ್ತು ಸರ್ಕಾರಿ ನೌಕರನೊಂದಿಗೆ ಆತನ ಅಥವಾ ಆಕೆಯ ಸಂಬಂಧ)

(ii) ಇರುವ ಸ್ಥಳ
(ಜಿಲ್ಲೆ, ತಾಲೂಕು ಹಾಗೂ ಗ್ರಾಮ ಅಥವಾ ಪಟ್ಟಣ)

(iii) ಸರ್ವೇ ನಂಬರ್

(iv) ವಿಸ್ತೀರ್ಣ

(v) ಆದಾಯ

(vi) ಸಂದಾಯ ಮಾಡಿದ ಬೆಲೆ

(vii) ಅಂದಾಜು ಮೌಲ್ಯ

(viii) ಸ್ವಂತದ್ದಾಗಿದ್ದರೆ, ಅದನ್ನು ಹೇಗೆ ಆರ್ಜಿಸಲಾಗಿದೆ
(ಖರೀದಿ, ದಾನ ಅಥವಾ ಪಿತ್ರಾರ್ಜಿತ)

ಅಥವಾ

ಗುತ್ತಿಗೆ ಅಥವಾ ಅಡಮಾನದ ಮೇಲೆ ಹೊಂದಿದ್ದರೆ, ಗುತ್ತಿಗೆ ಅಥವಾ ಅಡಮಾನದ ವಿವರಗಳು

(ಸಿ) ಒಣ ಅಥವಾ ಖುಷ್ಕಿ ಜಮೀನು:

(i) ಯಾರ ಹೆಸರಿನಲ್ಲಿ ಹೊಂದಲಾಗಿದೆ.
(ಸ್ವಂತ ಹೆಸರಿನಲ್ಲಿ ಇಲ್ಲದಿದ್ದರೆ, ಯಾರ ಹೆಸರಿನಲ್ಲಿ ಹೊಂದಲಾಗಿದೆ ತಿಳಿಸಿ ಹಾಗೂ ಸರ್ಕಾರಿ ನೌಕರನೊಂದಿಗೆ ಆತನ ಅಥವಾ ಆಕೆಯ ಸಂಬಂಧ)

(ii) ಇರುವ ಸ್ಥಳ
(ಜಿಲ್ಲೆ, ತಾಲೂಕು ಹಾಗೂ ಗ್ರಾಮ ಅಥವಾ ಪಟ್ಟಣ)

(iii) ಸರ್ವೇ ನಂಬರ್

(iv) ವಿಸ್ತೀರ್ಣ

(v) ಆದಾಯ

(vi) ಸಂದಾಯ ಮಾಡಿದ ಬೆಲೆ

(vii) ಅಂದಾಜು ಮೌಲ್ಯ

(viii) ಸ್ವಂತದ್ದಾದರೆ, ಅದನ್ನು ಹೇಗೆ ಆರ್ಜಿಸಲಾಗಿದೆ (ಖರೀದಿ, ದಾನ ಅಥವಾ ಪಿತ್ರಾರ್ಜಿತ)

ಅಥವಾ

ಗುತ್ತಿಗೆ ಅಥವಾ ಅಡಮಾನದ ಮೇಲೆ ಹೊಂದಿದ್ದರೆ ಗುತ್ತಿಗೆ ಅಥವಾ ಅಡಮಾನದ ವಿವರಗಳು

(ಡಿ) ಮನೆ ಸ್ವತ್ತು ಮತ್ತು ಕಟ್ಟಡ:–

(i) ಯಾರ ಹೆಸರಿನಲ್ಲಿ ಹೊಂದಲಾಗಿದೆ.

(ಸ್ವಂತ ಹೆಸರಿನಲ್ಲಿ ಇಲ್ಲದಿದ್ದರೆ, ಯಾರ ಹೆಸರಿನಲ್ಲಿ ಹೊಂದಲಾಗಿದೆ ತಿಳಿಸಿ ಹಾಗೂ ಸರ್ಕಾರಿ ನೌಕರನೊಂದಿಗೆ ಆತನ ಅಥವಾ ಆಕೆಯ ಸಂಬಂಧ)

(ii) ಇರುವ ಸ್ಥಳ

(ಜಿಲ್ಲೆ, ತಾಲೂಕು ಹಾಗೂ ಗ್ರಾಮ ಅಥವಾ ಪಟ್ಟಣ)

(iii) ಸರ್ವೇ ನಂಬರ್

(iv) ವಿಸ್ತೀರ್ಣ

(v) ಆದಾಯ

(vi) ಸಂದಾಯ ಮಾಡಿದ ಬೆಲೆ

(vii) ಅಂದಾಜು ಮೌಲ್ಯ

(viii) ಸ್ವಂತದ್ದಾಗಿದ್ದರೆ, ಅದನ್ನು ಹೇಗೆ ಆರ್ಜಿಸಲಾಗಿದೆ (ಖರೀದಿ, ದಾನ ಅಥವಾ ಪಿತ್ರಾರ್ಜಿತ)

ಅಥವಾ

ಗುತ್ತಿಗೆ ಅಥವಾ ಅಡಮಾನದ ಮೇಲೆ ಹೊಂದಿದ್ದರೆ, ಗುತ್ತಿಗೆ ಅಥವಾ ಅಡಮಾನದ ವಿವರಗಳು

(2) ಷೇರುಗಳು, ಡಿಬೆಂಚರುಗಳು, ಭದ್ರತಾ ಪತ್ರಗಳು ಹಾಗೂ ಬ್ಯಾಂಕು ಠೇವಣಿಗಳು:

ಷೇರುಗಳು, ಡಿಬೆಂಚರುಗಳು, ಭದ್ರತಾ ಪತ್ರಗಳು, ನಗದು ಹಾಗೂ ಬ್ಯಾಂಕ್ ಠೇವಣಿಗಳನ್ನು (ಪ್ರತ್ಯೇಕವಾಗಿ ಕೊಡಬೇಕು)

(i) ಯಾರ ಹೆಸರಿನಲ್ಲಿ ಹೊಂದಲಾಗಿದೆ ಅಥವಾ ಮಾಡಲಾಗಿದೆ:–

(ಸ್ವಂತ ಹೆಸರಿನಲ್ಲಿ ಇಲ್ಲದಿದ್ದರೆ, ಯಾರ ಹೆಸರಿನಲ್ಲಿ ಅದನ್ನು ಹೊಂದಲಾಗಿದೆ ತಿಳಿಸಿ ಅಥವಾ ಮಾಡಲಾಗಿದೆ ತಿಳಿಸಿ ಮತ್ತು ಸರ್ಕಾರಿ ನೌಕರನೊಂದಿಗೆ ಆತನ ಅಥವಾ ಆಕೆಯ ಸಂಬಂಧ)

(ii) ಮೌಲ್ಯ

(iii) ಬ್ಯಾಂಕು ಅಥವಾ ಕಂಪನಿಯ ಹೆಸರು

(iv) ಹೇಗೆ ಆರ್ಜಿಸಲಾಗಿದೆ

(v) ಆದಾಯ

(3) (2)ನೇ ಪ್ಯಾರಾದಲ್ಲಿ ನಿರ್ದಿಷ್ಟಪಡಿಸಲಾದವುಗಳನ್ನು ಹೊರತುಪಡಿಸಿದ ಚರ ಸ್ವತ್ತುಗಳು:–

(ಎ) ವರ್ಣನೆ ಅಥವಾ ವಿಧ

(23ನೇ ನಿಯಮದ ವಿವರಣೆಯನ್ನು ನೋಡಿ)

(ಬಿ) ಹೇಗೆ ಆರ್ಜಿಸಲಾಗಿದೆ

(ಸಿ) ಅಂದಾಜು ಮೌಲ್ಯ

(4) (ಎ) ವಿಮಾ ಪಾಲಿಸಿಗಳು

(i) ಪಾಲಿಸಿ ಸಂಖ್ಯೆ ಹಾಗೂ ಪಾಲಿಸಿಯ ದಿನಾಂಕ

(ii) ವಿಮಾ ಕಂಪನಿಯ ಹೆಸರು

(iii) ವಿಮೆ ಮಾಡಲಾದ ಮೊತ್ತ ಹಾಗೂ ಅವಧಿ ಪೂರ್ಣಗೊಳ್ಳುವ ದಿನಾಂಕ

(iv) ವಾರ್ಷಿಕ ಕಂತಿನ ಮೊತ್ತ

(**ಸೂಚನೆ:**– ಸರ್ಕಾರಿ ನೌಕರನು ಕುಟುಂಬದ ಸದಸ್ಯರ ಪಾಲಿಸಿಗಳ ಕಂತನ್ನು ಸಂದಾಯ ಮಾಡುತ್ತಿದ್ದರೆ ಅವುಗಳ ವಿವರಗಳನ್ನು ಸಹ ಸೇರಿಸತಕ್ಕದ್ದು).

(ಬಿ) ಭವಿಷ್ಯ ನಿಧಿ

(i) ಭವಿಷ್ಯ ನಿಧಿಯ ಬಗೆ – ಪಿಪಿಎಫ್/ ಜಿಪಿಎಫ್, ಸಿಪಿಎಫ್‌ನ ಖಾತೆ ಸಂಖ್ಯೆ

(ii) ಲೆಕ್ಕಪರಿಶೋಧನಾಧಿಕಾರಿಯು, ಲೆಕ್ಕಾಧಿಕಾರಿಯು, ಕೊನೆಯದಾಗಿ ವರದಿ ಮಾಡಲಾದಂತೆ ಮುಕ್ತಾಯದ ಶಿಲ್ಕು, ಅಂಥ ಶಿಲ್ಕಿನ ದಿನಾಂಕದೊಂದಿಗೆ;

(iii) ತರುವಾಯ ಸಲ್ಲಿಸಿದ ವಂತಿಗೆಗಳು;

(iv) ಒಟ್ಟು.

(**ಸೂಚನೆ:–** ಸರ್ಕಾರಿ ನೌಕರನು ಆ ಕುಟುಂಬದ ಸದಸ್ಯರ ಹೆಸರುಗಳಲ್ಲಿ ವಂತಿಗೆಗಳನ್ನು ಸಂದಾಯ ಮಾಡುತ್ತಿದ್ದರೆ, ಪಿಪಿಎಫ್‌ಗೆ ಸಲ್ಲಿಸಿದ ವಂತಿಗೆಗಳ ವಿವರಗಳನ್ನು ಸಹ ಸೇರಿಸತಕ್ಕದ್ದು.)

**ಹೊಣೆಗಾರಿಕೆಗಳು**

(1) ಋಣಗಳು:

(ಎ) ಸಾಲ ಕೊಟ್ಟವನ ಹೆಸರು ಮತ್ತು ವಿಳಾಸ

(ಬಿ) ಮೊತ್ತ

(ಸಿ) ಸಾಲ ಪಡೆದ ದಿನಾಂಕ

(2) ಇತರೆ ಹೊಣೆಗಾರಿಕೆಗಳು:–

(ಎ) ಸಾಲ ಕೊಟ್ಟವನ ಹೆಸರು ಮತ್ತು ವಿಳಾಸ

(ಬಿ) ಮೊತ್ತ

(ಸಿ) ಹೊಣೆಗಾರಿಕೆಯ ಸ್ವರೂಪ

(ಡಿ) ದಿನಾಂಕ

––––––––– ಎಂಬ ನಾನು ಮೇಲ್ಕಂಡ ಪ್ಯಾರಾಗಳಲ್ಲಿ ಹೇಳಿದ ಮಾಹಿತಿಯು ನಿಜವಾದುದೆಂದು ಹಾಗೂ ಸರಿಯಾದುದು ಎಂದು ಹಾಗೂ ಮೇಲ್ಕಂಡ ಪ್ಯಾರಾಗಳಲ್ಲಿ ಏನನ್ನು ತಿಳಿಸಿದ್ದೇನೆಯೋ ಅದನ್ನು ಹೊರತುಪಡಿಸಿ, ಇತರ ಯಾವುದೇ ಆಸ್ತಿಗಳನ್ನು ಅಥವಾ ಹೊಣೆಗಾರಿಕೆಗಳನ್ನು ನನ್ನ ಹೆಸರಿನಲ್ಲಾಗಲೀ ಅಥವಾ ಇತರ ಯಾರೇ ವ್ಯಕ್ತಿಯ ಹೆಸರಿನಲ್ಲಾಗಲೀ ಒಡೆತನ ಹೊಂದಿರುವುದಿಲ್ಲವೆಂದು ಅಥವಾ ಹೊಂದಿರುವುದಿಲ್ಲವೆಂದು ಅಥವಾ ಅವು ಒಳಪಟ್ಟಿಲ್ಲವೆಂದು ಈ ಮೂಲಕ ಶ್ರದ್ಧಾಪೂರ್ವಕವಾಗಿ ಘೋಷಿಸುತ್ತೇನೆ.

ಸ್ಥಳ: ಸಹಿ

ದಿನಾಂಕ: ಪದನಾಮ

**ಸಾಮಾನ್ಯ ಆಡಳಿತ ಸಚಿವಾಲಯ**

**ಅಧಿಸೂಚನೆ**

**ಬೆಂಗಳೂರು, ದಿನಾಂಕ 4ನೇ ಏಪ್ರಿಲ್ 1968**

**ಜಿ.ಎಸ್.ಆರ್. 126.–** ಮೈಸೂರು ರಾಜ್ಯಪಾಲರು, ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಹಾಗೂ ಈ ಬಗ್ಗೆ ಅವರನ್ನು ಶಕ್ತಗೊಳಿಸುವ ಇತರ ಎಲ್ಲಾ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಮೈಸೂರು ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 1968 ಎಂದು ಕರೆಯತಕ್ಕದ್ದು.

(2) ಅವು ಈ ಕೂಡಲೇ ಜಾರಿಗೆ ಬರತಕ್ಕದ್ದು.

2. **7ನೇ ನಿಯಮವನ್ನು ಬಿಟ್ಟುಬಿಡುವುದು.–** ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 7ನೇ ನಿಯಮವನ್ನು ಬಿಟ್ಟುಬಿಡತಕ್ಕದ್ದು.

[ಸಂ.ಜಿಎಡಿ 43 ಎಸ್‌ಎಸ್ ಆರ್ 67]

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಬ್ಲ್ಯೂ ಎ ಸ್ಮಿತ್**

ಅಧೀನ ಕಾರ್ಯದರ್ಶಿ.

**ಸಾಮಾನ್ಯ ಆಡಳಿತ ಸಚಿವಾಲಯ**

**ಅಧಿಸೂಚನೆ**

**ಬೆಂಗಳೂರು, ದಿನಾಂಕ 19ನೇ ಆಗಸ್ಟ್ 1968**

**ಜಿ.ಎಸ್.ಆರ್.304.–** ಮೈಸೂರಿನ ರಾಜ್ಯಪಾಲರು, ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಹಾಗೂ ಈ ಬಗ್ಗೆ ಅವರನ್ನು ಶಕ್ತಗೊಳಿಸುವ ಇತರ ಎಲ್ಲಾ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಮೈಸೂರು ಸಿವಿಲ್ ಸೇವಾ (ನಡತೆ) (ಎರಡನೇ ತಿದ್ದುಪಡಿ) ನಿಯಮಗಳು, 1968 ಎಂದು ಕರೆಯತಕ್ಕದ್ದು.

(2) ಅವು ಈ ಕೂಡಲೇ ಜಾರಿಗೆ ಬರತಕ್ಕದ್ದು.

2. **9ನೇ ನಿಯಮದ ತಿದ್ದುಪಡಿ.–** ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 9ನೇ ನಿಯಮದಲ್ಲಿ, ಪರಂತುಕವನ್ನು ಒಳಗೊಂಡಂತೆ (ii)ನೇ ಖಂಡದ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ii) ಯಾರೇ ಸರ್ಕಾರಿ ನೌಕರನು, ಸರ್ಕಾರದ ಅಥವಾ ನಿಯಮಿಸಿದ ಪ್ರಾಧಿಕಾರದ ಪೂರ್ವ ಮಂಜೂರಾತಿಯನ್ನು ಪಡೆದ ಹೊರತು ಅಥವಾ ತನ್ನ ಕರ್ತವ್ಯಗಳ ಪ್ರಾಮಾಣಿಕ ನಿರ್ವಹಣೆಯ ಸಂದರ್ಭದಲ್ಲಿ ಹೊರತು,–

(ಎ) ಪುಸ್ತಕವನ್ನು ತಾನೇ ಅಥವಾ ಪ್ರಕಾಶಕರ ಮೂಲಕ ಪ್ರಕಟಿಸತಕ್ಕದ್ದಲ್ಲ ಅಥವಾ ಪುಸ್ತಕಕ್ಕೆ ಅಥವಾ ಲೇಖನಗಳ ಸಂಕಲನಕ್ಕೆ ಲೇಖನವನ್ನು ಬರೆದುಕೊಡತಕ್ಕದ್ದಲ್ಲ; ಅಥವಾ

(ಬಿ) ಆಕಾಶವಾಣಿ ಪ್ರಸಾರದಲ್ಲಿ ಭಾಗವಹಿಸತಕ್ಕದ್ದಲ್ಲ ಅಥವಾ ಯಾವುದೇ ವೃತ್ತ ಪತ್ರಿಕೆಗೆ ಅಥವಾ ನಿಯತಕಾಲಿಕೆಗೆ ತನ್ನ ಹೆಸರಿನಲ್ಲಾಗಲೀ ಅಥವಾ ಅನಾಮಧೇಯವಾಗಿಯಾಗಲಿ ಅಥವಾ ಗುಪ್ತನಾಮದಿಂದಾಗಲೀ ಅಥವಾ ಬೇರೊಬ್ಬ ವ್ಯಕ್ತಿಯ ಹೆಸರಿನಲ್ಲಾಗಲಿ ಲೇಖನವನ್ನು ಬರೆಯತಕ್ಕದ್ದಲ್ಲ ಅಥವಾ ಪತ್ರವನ್ನು ಬರೆಯತಕ್ಕದ್ದಲ್ಲ:

ಪರಂತು,–

(i) ಅಂಥ ಪ್ರಕಟಣೆಯು ಪ್ರಕಾಶಕರ ಮೂಲಕ ಆಗಿದ್ದರೆ ಮತ್ತು ಅದು ಸಂಪೂರ್ಣವಾಗಿ ಸಾಹಿತ್ಯಿಕ, ಕಲಾತ್ಮಕ ಅಥವಾ ವೈಜ್ಞಾನಿಕ ಸ್ವರೂಪದಾಗಿದ್ದರೆ; ಅಥವಾ

(ii) ಅಂಥ ಲೇಖನವು, ಅಥವಾ ಪ್ರಸಾರವು ಅಥವಾ ಬರವಣಿಗೆಯು ಸಂಪೂರ್ಣವಾಗಿ ಸಾಹಿತ್ಯಿಕ, ಕಲಾತ್ಮಕ ಅಥವಾ ವೈಜ್ಞಾನಿಕ ಸ್ವರೂಪದ್ದಾಗಿದ್ದರೆ

– ಅಂಥ ಯಾವುದೇ ಅನುಮತಿಯು ಅವಶ್ಯವಿರತಕ್ಕದ್ದಲ್ಲ."

[ಸಂ.ಜಿಎಡಿ 34 ಎಸ್ಎಸ್ಆರ್ 68]

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಬ್ಲ್ಯೂ ಎ ಸ್ಮಿತ್**

ಅಧೀನ ಕಾರ್ಯದರ್ಶಿ.

**ಸಾಮಾನ್ಯ ಆಡಳಿತ ಸಚಿವಾಲಯ**

**ಅಧಿಸೂಚನೆ**

**ಬೆಂಗಳೂರು, ದಿನಾಂಕ 9ನೇ ಡಿಸೆಂಬರ್ 1971**

**ಜಿ.ಎಸ್.ಆರ್. 408.–** ಮೈಸೂರು ರಾಜ್ಯಪಾಲರು, ಭಾರತ ರಾಷ್ಟ್ರಪತಿಯವರ ಆದೇಶ ಜಿಎಸ್ಆರ್ 458 ದಿನಾಂಕ 27ನೇ ಮಾರ್ಚ್ 1971ರೊಂದಿಗೆ ಓದಲಾದಂತೆ ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಮೈಸೂರು ಸಿವಿಲ್ ಸೇವಾ (ನಡತೆ) (ಮೊದಲನೇ ತಿದ್ದುಪಡಿ) ನಿಯಮಗಳು, 1971 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 23ನೇ ನಿಯಮಕ್ಕೆ ತಿದ್ದುಪಡಿ.–** ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 23ನೇ ನಿಯಮದ (3)ನೇ ಉಪನಿಯಮದ ತರುವಾಯ, ಈ ಮುಂದಿನ ಉಪ–ನಿಯಮವನ್ನು ಸೇರಿಸತಕ್ಕದ್ದು, ಎಂದರೆ:–

"(3ಎ) ಪ್ರತಿಯೊಬ್ಬ ಸರ್ಕಾರಿ ನೌಕರನು, ತನ್ನ ಸಂಬಳ ಮತ್ತು ಭತ್ಯೆಗಳು, ವಿಮೆ ಅಥವಾ ಭವಿಷ್ಯನಿಧಿಯನ್ನು ಹೊರತುಪಡಿಸಿ ಇತರ ಮೂಲಗಳಿಂದ ತಾನು ಅಥವಾ ತನ್ನ ಕುಟುಂಬದ ಯಾರೇ ಸದಸ್ಯನು ಸ್ವೀಕರಿಸಿದ ನಗದಿನ ಸಂಬಂಧದಲ್ಲಿನ ಪ್ರತಿಯೊಂದು ವ್ಯವಹಾರವನ್ನು, ಯಾವುದೇ ವರ್ಗ–I ಅಥವಾ ವರ್ಗ–II ರ ಹುದ್ದೆಯನ್ನು ಧಾರಣ ಮಾಡಿರುವ ಸರ್ಕಾರಿ ನೌಕರನ ಸಂಬಂಧದಲ್ಲಿ ಅಂಥ ನಗದು 1000 ರೂಪಾಯಿಗಳನ್ನು ಮೀರಿದ್ದರೆ ಅಥವಾ ಯಾವುದೇ ವರ್ಗ– III ಅಥವಾ ವರ್ಗ– IV ರ ಹುದ್ದೆಯನ್ನು ಧಾರಣ ಮಾಡಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 500 ರೂಪಾಯಿಗಳನ್ನು ಮೀರಿದರೆ ನಿಯಮಿಸಿದ ಪ್ರಾಧಿಕಾರಿಗೆ ವರದಿ ಮಾಡತಕ್ಕದ್ದು."

[ಸಂ.ಜಿಎಡಿ 14 ಎಸ್‌ಆರ್‌ಸಿ 67]

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಪಿ. ಧರಣೇಂದ್ರನಾಥ್,**

ಸರ್ಕಾರದ ಅಧೀನ ಕಾರ್ಯದರ್ಶಿ

ಸಾಮಾನ್ಯ ಆಡಳಿತ ಇಲಾಖೆ (ಸೇವಾ ನಿಯಮಗಳು)

**ಸಾಮಾನ್ಯ ಆಡಳಿತ ಸಚಿವಾಲಯ**

**ಅಧಿಸೂಚನೆ**

**ಬೆಂಗಳೂರು, ದಿನಾಂಕ 26ನೇ ಮೇ 1972**

**ಜಿ.ಎಸ್.ಆರ್.328.–** ಮೈಸೂರಿನ ರಾಜ್ಯಪಾಲರು, ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಮೈಸೂರು ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 1972 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ *ಜಾರಿಗೆ ಬರತಕ್ಕದ್ದು.

**2. 1ನೇ ನಿಯಮಕ್ಕೆ ತಿದ್ದುಪಡಿ.–** ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 1ನೇ ನಿಯಮದ (3)ನೇ ಉಪನಿಯಮದ ಪರಂತುಕದ ತರುವಾಯ ಈ ಮುಂದಿನ ಹೆಚ್ಚಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತೂ ಪರಂತು, ನಿಯಮ 9, 14, 16 ಮತ್ತು 23 ಇವುಗಳು ಪೂರ್ಣಕಾಲಿಕ ಉದ್ಯೋಗದಲ್ಲಿರದ ಸರ್ಕಾರಿ ನೌಕರನಿಗೆ ಅನ್ವಯವಾಗತಕ್ಕದ್ದಲ್ಲ".

ಮೈಸೂರು ರಾಜ್ಯಪಾಲರು

[ಸಂ.ಜಿಎಡಿ 4 ಎಸ್‌ಆರ್‌ಸಿ 72]

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಪಿ. ಧರಣೇಂದ್ರನಾಥ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾಮಾನ್ಯ ಆಡಳಿತ ಇಲಾಖೆ (ಸೇವಾ ನಿಯಮಗಳು).

---

* ಕರ್ನಾಟಕ ರಾಜ್ಯಪತ್ರ ದಿನಾಂಕ 19ನೇ ಅಕ್ಟೋಬರ್ 1972 ಭಾಗ IV 2ಸಿ (i) ರಲ್ಲಿ ಪ್ರಕಟಿಸಲಾಗಿದೆ.

**ಸಾಮಾನ್ಯ ಆಡಳಿತ ಸಚಿವಾಲಯ**

**ಅಧಿಸೂಚನೆ**

**ಬೆಂಗಳೂರು, ದಿನಾಂಕ 9ನೇ ಅಕ್ಟೋಬರ್ 1973**

**ಜಿ.ಎಸ್.ಆರ್.259.–** ಮೈಸೂರು ರಾಜ್ಯಪಾಲರು, ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಮೈಸೂರು ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 1973 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ * ಜಾರಿಗೆ ಬರತಕ್ಕದ್ದು.

**2. 10ನೇ ನಿಯಮಕ್ಕೆ ತಿದ್ದುಪಡಿ.–** ಮೈಸೂರು ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 10ನೇ ನಿಯಮದ (1)ನೇ ಖಂಡದ ಪರಂತುಕದ ಬದಲಾಗಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಈ ಖಂಡದಲ್ಲಿ ಒಳಗೊಂಡಿರುವುದು ಯಾವುದೂ, ಸರ್ಕಾರಿ ನೌಕರನು, ಸರ್ಕಾರಿ ನೌಕರರ ಕಾರ್ಮಿಕ ಸಂಘದ ಅಥವಾ ಸಂಘದ ಪದಾಧಿಕಾರಿಯಾಗಿ ಅಂಥ ಸರ್ಕಾರಿ ನೌಕರರ ಸೇವಾ ಸ್ಥಿತಿಗತಿಗಳನ್ನು ರಕ್ಷಿಸುವ ಅಥವಾ ಅವುಗಳಲ್ಲಿ ಸುಧಾರಣೆಯನ್ನು ಸುನಿಶ್ಚಿತಗೊಳಿಸುವ ಉದ್ದೇಶಗಳಿಗಾಗಿ ವ್ಯಕ್ತಪಡಿಸಿದ ಪ್ರಾಮಾಣಿಕ ಅಭಿಪ್ರಾಯಗಳಿಗೆ ಅನ್ವಯಿಸತಕ್ಕದ್ದಲ್ಲ; ಅಥವಾ".

ಮೈಸೂರು ರಾಜ್ಯಪಾಲರು
(ಸಂ .ಜಿಎಡಿ 6 ಎಸ್‌ಆರ್‌ಸಿ 73)
ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವನ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾಮಾನ್ಯ ಆಡಳಿತ ಇಲಾಖೆ (ಸೇವಾ ನಿಯಮಗಳು).

---

* ಕರ್ನಾಟಕ ರಾಜ್ಯಪತ್ರ ದಿನಾಂಕ 19ನೇ ಅಕ್ಟೋಬರ್ 1972 ಭಾಗ IV 2ಸಿ (i) ರಲ್ಲಿ ಪ್ರಕಟಿಸಲಾಗಿದೆ.

**ಸಾಮಾನ್ಯ ಆಡಳಿತ ಸಚಿವಾಲಯ**

**ಅಧಿಸೂಚನೆ**

**ಬೆಂಗಳೂರು, ದಿನಾಂಕ 9ನೇ ನವೆಂಬರ್ 1973**

**ಜಿ.ಎಸ್.ಆರ್. 304.–** ಕರ್ನಾಟಕ ರಾಜ್ಯಪಾಲರು, ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ಎರಡನೇ ತಿದ್ದುಪಡಿ) ನಿಯಮಗಳು, 1973 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ * ಜಾರಿಗೆ ಬರತಕ್ಕದ್ದು.

**2. 23ನೇ ನಿಯಮಕ್ಕೆ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 23ನೇ ನಿಯಮದ ವಿವರಣೆಯ (1)ನೇ ಖಂಡದ (ಎ) ಬಾಬಿನಲ್ಲಿ, "ಸರ್ಕಾರದಿಂದ ಪಡೆದ ಯಾವ ವಿಮಾ ಪಾಲಿಸಿಗಳ ವಾರ್ಷಿಕ ಕಂತು "1000 ರೂಗಳನ್ನು ಅಥವಾ ಒಟ್ಟು ವಾರ್ಷಿಕ ಉಪಲಬ್ದಿಗಳ ಆರನೇ ಒಂದು ಭಾಗವನ್ನು ಮೀರುವುದೋ ಆ ವಿಮಾ ಪಾಲಿಸಿಗಳು ಇವೆರಡರಲ್ಲಿ ಯಾವುದು ಕಡಿಮೆಯೋ ಅದು" ಎಂಬ ಪದಗಳಿಗೆ, ಅಕ್ಷರಗಳಿಗೆ ಹಾಗೂ ಸಂಖ್ಯೆಗಳ ಬದಲಾಗಿ "ವಿಮಾ ಪಾಲಿಸಿಗಳು, ಭವಿಷ್ಯ ನಿಧಿ" ಎಂಬ ಪದಗಳನ್ನು ಸೇರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರು
(ಸಂ. ಜಿಎಡಿ 5 ಎಸ್‌ಆರ್‌ಸಿ 73)
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾಮಾನ್ಯ ಆಡಳಿತ ಇಲಾಖೆ (ಸೇವಾ ನಿಯಮಗಳು).

---

* ಕರ್ನಾಟಕ ರಾಜ್ಯಪತ್ರ ದಿನಾಂಕ 6ನೇ ಡಿಸೆಂಬರ್ 1973 ಭಾಗ IV 2 (i) ರಲ್ಲಿ ಪ್ರಕಟವಾಗಿದೆ.

**ಕರ್ನಾಟಕ ಸರ್ಕಾರ**

**ಮುಖ್ಯ ಸಚಿವಾಲಯ**

**ಸಾಮಾನ್ಯ ಆಡಳಿತ ಇಲಾಖೆ**

**ರಾಜ್ಯ ಸಿವಿಲ್ ಸೇವೆಗಳ ಕೇಡರ್‌ನಲ್ಲಿರುವ ಅಧಿಕಾರಿಗಳ ವಾರ್ಷಿಕ ಆಸ್ತಿ ವಿವರಣ ಪಟ್ಟಿ – ವಿಮಾ ಪಾಲಿಸಿಗಳ ಹಾಗೂ ಭವಿಷ್ಯನಿಧಿಯ ವಿವರಗಳನ್ನು ಒದಗಿಸುವುದು**

**ಅಧಿಕೃತ ಜ್ಞಾಪನ ಪತ್ರ**

**ಓ.ಎಂ. ಸಂಖ್ಯೆ ಜಿಎಡಿ 5 ಎಸ್‌ಆರ್‌ಸಿ 73, ಬೆಂಗಳೂರು, ದಿನಾಂಕ 27ನೇ ನವೆಂಬರ್ 1973**

ಅಧಿಕೃತ ಜ್ಞಾಪನ ಪತ್ರ ಸಂ. ಜಿಎಡಿ 9 ಎಸ್‌ಎಸ್‌ಆರ್ 67, ದಿನಾಂಕ 18ನೇ ಡಿಸೆಂಬರ್ 1967, ಇದಕ್ಕೆ ಲಗತ್ತಿಸಲಾದ ನಮೂನೆಯಲ್ಲಿ, ಅಂಕಣ 5(3)ರ ತರುವಾಯ, ಈ ಮುಂದಿನ ಅಂಕಣಗಳನ್ನು ಸೇರಿಸತಕ್ಕದ್ದು, ಎಂದರೆ:–

"(4)(ಎ) **ವಿಮಾ ಪಾಲಿಸಿಗಳು.–**

(i) ಪಾಲಿಸಿ ಸಂಖ್ಯೆ ಹಾಗೂ ಪಾಲಿಸಿ ದಿನಾಂಕ

(ii) ವಿಮಾ ಕಂಪನಿಯ ಹೆಸರು

(iii) ವಿಮೆ ಮಾಡಿಸಿದ ಮೊತ್ತ ಹಾಗೂ ವಾಯಿದೆ ಪೂರ್ಣವಾಗುವ ದಿನಾಂಕ

(iv) ವಾರ್ಷಿಕ ವಿಮಾ ಕಂತಿನ ಮೊತ್ತ

(**ವಿಶೇಷ ಸೂಚನೆ:** ಸರ್ಕಾರಿ ನೌಕರನು ತನ್ನ ಕುಟುಂಬದ ಸದಸ್ಯರ ಪಾಲಿಸಿಗಳ ವಿಮಾ ಕಂತುಗಳನ್ನು ಸಂದಾಯ ಮಾಡುತ್ತಿದ್ದರೆ, ಅವುಗಳ ವಿವರಗಳನ್ನು ಸಹ ಸೇರಿಸತಕ್ಕದ್ದು).

(ಬಿ) **ಭವಿಷ್ಯ ನಿಧಿ:**

(i) ಭವಿಷ್ಯನಿಧಿಯ ಬಗೆ ಪಿಪಿಎಫ್/ ಜಿಪಿಎಫ್/ ಸಿಪಿಎಫ್ ನ ಖಾತೆಯ ಸಂಖ್ಯೆ;

(ii) ಲೆಕ್ಕ ಪರಿಶೋಧನಾಧಿಕಾರಿಯು/ ಲೆಕ್ಕಾಧಿಕಾರಿಯು ಕೊನೆಯಲ್ಲಿ ವರದಿ ಮಾಡಿದಂತೆ ಮುಕ್ತಾಯ ಶಿಲ್ಕು, ಆ ಶಿಲ್ಕಿನ ದಿನಾಂಕದೊಂದಿಗೆ;

(iii) ತರುವಾಯ ನೀಡಿದ ವಂತಿಗೆಗಳು;

(iv) ಒಟ್ಟು.

(**ವಿಶೇಷ ಸೂಚನೆ:** ಸರ್ಕಾರಿ ನೌಕರನು ತನ್ನ ಕುಟುಂಬದ ಸದಸ್ಯರ ಹೆಸರುಗಳಲ್ಲಿ ಪಿಪಿಎಫ್‌ಗೆ ವಂತಿಗೆಗಳನ್ನು ಸಂದಾಯ ಮಾಡುತ್ತಿದ್ದರೆ, ಆ ವಂತಿಗೆಗಳ ವಿವರಗಳನ್ನೂ ಕೂಡ ಸೇರಿಸತಕ್ಕದ್ದು.)

**ಟಿ.ಎಂ. ವಾಸುದೇವನ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾಮಾನ್ಯ ಆಡಳಿತ ಇಲಾಖೆ (ಸೇವಾ ನಿಯಮಗಳು).

**ಕೇಂದ್ರ ಅಧಿನಿಯಮಗಳ ಮತ್ತು ರಾಜ್ಯ ಅಧಿನಿಯಮಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ಸಂವಿಧಾನದ ಮೇರೆಗೆ ರಾಜ್ಯಪಾಲರು ರಚಿಸಿದ ನಿಯಮಗಳು**

**ಸಾಮಾನ್ಯ ಆಡಳಿತ ಸಚಿವಾಲಯ**

**ಅಧಿಸೂಚನೆ**

**ಬೆಂಗಳೂರು, ದಿನಾಂಕ 31ನೇ ಡಿಸೆಂಬರ್ 1973**

**ಜಿ.ಎಸ್.ಆರ್**. 26.– ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ನಾಲ್ಕನೇ ತಿದ್ದುಪಡಿ) ನಿಯಮಗಳು, 1973 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

2. **6ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 16ನೇ ನಿಯಮದ (1)ನೇ ಉಪನಿಯಮದ ಪರಂತುಕಕ್ಕೆ ಹಾಗೂ ವಿವರಣೆಗೆ ಬದಲಾಗಿ ಈ ಮುಂದಿನ ಪರಂತುಕಗಳನ್ನು ಹಾಗೂ ವಿವರಣೆಗಳನ್ನು ಸೇರಿಸತಕ್ಕದ್ದು, ಎಂದರೆ:–

ಪರಂತು, ಸರ್ಕಾರಿ ನೌಕರನು, ಅಂಥ ಮಂಜೂರಾತಿಯನ್ನು ಪಡೆಯದೆ ಸಾಮಾಜಿಕ ಅಥವಾ ಧರ್ಮಾರ್ಥ ಸ್ವರೂಪದ ಗೌರವಾರ್ಥ ಕೆಲಸಗಳನ್ನು ಅಥವಾ ಸಾಹಿತ್ಯಕ, ಕಲಾತ್ಮಕ ಅಥವಾ ವೈಜ್ಞಾನಿಕ ಸ್ವರೂಪದ ಸಾಂದರ್ಭಿಕ ಕೆಲಸಗಳನ್ನು ಈ ಮುಂದಿನ ಷರತ್ತುಗಳಿಗೊಳಪಟ್ಟು ಕೈಗೊಳ್ಳಬಹುದು, ಎಂದರೆ:–

(i) ಅಂಥ ಯಾವುದೇ ಕೆಲಸಗಳನ್ನು ತಾನು ಕೈಗೊಂಡ ಒಂದು ತಿಂಗಳೊಳಗಾಗಿ ಅವನು ಸರ್ಕಾರಕ್ಕೆ ಅದರ ಸಂಪೂರ್ಣ ವಿವರಗಳನ್ನು ವರದಿ ಮಾಡತಕ್ಕದ್ದು;

(ii) ಅದರಿಂದ ಆತನ ಅಧಿಕೃತ ಕರ್ತವ್ಯಗಳಿಗೆ ತೊಂದರೆಯಾಗಬಾರದು; ಮತ್ತು

(iii) ಯಾವುದೇ ಅಂಥ ಕೆಲಸವನ್ನು ಮುಂದುವರೆಸಬಾರದೆಂದು ಸರ್ಕಾರವು ನಿರ್ದೇಶಿಸಿದರೆ ಅವನು ಅಂಥ ಕೆಲಸವನ್ನು ನಿಲ್ಲಿಸತಕ್ಕದ್ದು:

ಮತ್ತೂ ಪರಂತು, ಯಾವುದೇ ಅಂಥ ಕೆಲಸವನ್ನು ಕೈಗೊಳ್ಳುವುದರಲ್ಲಿ ಚುನಾವಣೆ ಮೂಲಕ ತುಂಬಬೇಕಾದ ಪದವನ್ನು ಧಾರಣ ಮಾಡುವುದನ್ನು ಒಳಗೊಂಡಿದ್ದರೆ ಸರ್ಕಾರದ ಪೂರ್ವ ಮಂಜೂರಾತಿಯಿಲ್ಲದೆ ಅಂತಹ ಯಾವುದೇ ಪದದ ಚುನಾವಣೆಗೆ ಸ್ವರ್ಧಿಸತಕ್ಕದ್ದಲ್ಲ.

**ವಿವರಣೆ** I:– ಎರಡನೇ ಪರಂತುಕದಲ್ಲಿ ಉಲ್ಲೇಖಿಸಲಾದ ಚುನಾವಣೆ ಮೂಲಕ ತುಂಬಬೇಕಾದ ಪದಕ್ಕಾಗಿ ಸ್ವರ್ಧಿಸುವ ಅಭ್ಯರ್ಥಿಯ ಅಥವಾ ಅಭ್ಯರ್ಥಿಗಳ ಪರವಾಗಿ ಸರ್ಕಾರಿ ನೌಕರನು ಪ್ರಚಾರ ಮಾಡುವುದನ್ನು ಈ ಉಪ ನಿಯಮದ ಉಲ್ಲಂಘನೆಯೆಂದು ಭಾವಿಸತಕ್ಕದ್ದು.

**ವಿವರಣೆ II**:– ಸರ್ಕಾರಿ ನೌಕರನು ತನ್ನ ಹೆಂಡತಿಯ ಅಥವಾ ತನ್ನ ಕುಟುಂಬದ ಯಾರೇ ಇತರ ಸದಸ್ಯನ ಒಡೆತನದಲ್ಲಿರುವ ಅಥವಾ ನಿರ್ವಹಣೆಯಲ್ಲಿರುವ ವ್ಯವಹಾರವನ್ನು ಅಥವಾ ವಿಮಾ ಏಜೆನ್ಸಿಯನ್ನು ಅಥವಾ ಕಮೀಷನ್ ಏಜೆನ್ಸಿಯನ್ನು ಬೆಂಬಲಿಸಿ ಪ್ರಚಾರ ಮಾಡುವುದನ್ನು ಈ ಉಪ ನಿಯಮದ ಉಲ್ಲಂಘನೆಯೆಂದು ಭಾವಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರು

(ಸಂ. ಜಿಎಡಿ 13 ಎಸ್‌ಆರ್‌ಸಿ 73)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎಂ. ವಾಸುದೇವನ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾಮಾನ್ಯ ಆಡಳಿತ ಇಲಾಖೆ (ಸೇವಾ ನಿಯಮಗಳು).

## ಸಾಮಾನ್ಯ ಆಡಳಿತ ಸಚಿವಾಲಯ

## ಅಧಿಸೂಚನೆ

**ಬೆಂಗಳೂರು, ದಿನಾಂಕ 18ನೇ ಅಕ್ಟೋಬರ್ 1974**

**ಜಿ.ಎಸ್.ಆರ್. 308.**– ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 1974 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 21ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 21ನೇ ನಿಯಮದ (4)ನೇ ಉಪನಿಯಮದ (i) ನೇ ಖಾಬಿನ ಪರಂತುಕದಲ್ಲಿ "**ಒಂದು ಸಣ್ಣ ಮೊತ್ತವನ್ನು**" ಎಂಬ ಪದಗಳ ಬದಲಾಗಿ "**ತನ್ನ ಒಟ್ಟು ತಿಂಗಳ ಉಪಲಬ್ಧಿಗಳನ್ನು ಮೀರದಷ್ಟು ಮೊತ್ತವನ್ನು**" ಎಂಬ ಪದಗಳನ್ನು ಸೇರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರು

(ಸಂ. ಜಿಎಡಿ 5 ಎಸ್‌ಆರ್‌ಸಿ 73)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಪಿ. ಜೋಶಿ,**

ಸರ್ಕಾರದ ಉಪ ಕಾರ್ಯದರ್ಶಿ,

ಸಾಮಾನ್ಯ ಆಡಳಿತ ಇಲಾಖೆ (ಸೇವಾ ನಿಯಮಗಳು).

**ಸಾಮಾನ್ಯ ಆಡಳಿತ ಸಚಿವಾಲಯ**

**ಅಧಿಸೂಚನೆ ಸಂ. ಜಿಎಡಿ 1 ಎಸ್‌ಆರ್‌ಸಿ 75**

**ಬೆಂಗಳೂರು, ದಿನಾಂಕ 6ನೇ ಅಕ್ಟೋಬರ್ 1975**

**ಜಿ.ಎಸ್.ಆರ್**. 296.– ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 1975 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು* ಅವು ಜಾರಿಗೆ ಬರತಕ್ಕದ್ದು.

1. ಕರ್ನಾಟಕ ರಾಜ್ಯಪತ್ರ ದಿನಾಂಕ 23ನೇ ಅಕ್ಟೋಬರ್ 1975 ಭಾಗ V 2ಸಿ (i) ರಲ್ಲಿ ಪ್ರಕಟಿಸಲಾಗಿದೆ.

**2. 16ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳು ಎಂದು ಉಲ್ಲೇಖಿಸಲಾಗಿದೆ) 16ನೇ ನಿಯಮದ (1)ನೇ ಉಪನಿಯಮದಲ್ಲಿ "ಯಾವುದೇ ಇತರ ಉದ್ಯೋಗವನ್ನು ಕೈಗೊಳ್ಳತಕ್ಕದ್ದಲ್ಲ" ಎಂಬ ಪದಗಳಿಗೆ ಬದಲಾಗಿ "ಯಾವುದೇ ಇತರ ಉದ್ಯೋಗಕ್ಕಾಗಿ ಮಾತುಕತೆ ನಡೆಸತಕ್ಕದ್ದಲ್ಲ ಅಥವಾ ಯಾವುದೇ ಇತರ ಉದ್ಯೋಗವನ್ನು ಕೈಗೊಳ್ಳತಕ್ಕದ್ದಲ್ಲ" ಎಂಬ ಪದಗಳನ್ನು ಸೇರಿಸತಕ್ಕದ್ದು.

**3. 23ನೇ ನಿಯಮದ ತಿದ್ದುಪಡಿ.**– ಸದರಿ ನಿಯಮಗಳ 23ನೇ ನಿಯಮದ ವಿವರಣೆಯಲ್ಲಿ,– (1) ಖಂಡ (1) ಮತ್ತು (2)ಕ್ಕೆ ಅನುಕ್ರಮವಾಗಿ (2) ಮತ್ತು (3) ಎಂದು ಮರುಸಂಖ್ಯೆ ನೀಡತಕ್ಕದ್ದು ಹಾಗೂ ಹಾಗೆ ಮರುಸಂಖ್ಯೆ ನೀಡಲಾದ (2)ನೇ ಖಂಡಕ್ಕೆ ಮುಂಚೆ ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:–

(i) "ಗುತ್ತಿಗೆ" ಎಂದರೆ ಸರ್ಕಾರಿ ನೌಕರನೊಂದಿಗೆ ಯಾವುದೇ ಅಧಿಕೃತ ವ್ಯವಹಾರಗಳನ್ನು ಹೊಂದಿರುವ ವ್ಯಕ್ತಿಯಿಂದ ಪಡೆದುಕೊಳ್ಳಲಾದುದನ್ನು ಅಥವಾ ಆ ವ್ಯಕ್ತಿಗೆ ನೀಡಲಾಗಿರುವುದನ್ನು ಹೊರತುಪಡಿಸಿ, ವರ್ಷದಿಂದ ವರ್ಷಕ್ಕೆ ಅಥವಾ ಒಂದು ವರ್ಷ ಮೀರಿದ ಯಾವುದೇ ಅವಧಿಗೆ ಅಥವಾ ವಾರ್ಷಿಕ ಬಾಡಿಗೆ ಬರುವಂತಿರುವ ಸ್ಥಿರಾಸ್ತಿಯ ಗುತ್ತಿಗೆ ಎಂದು ಅರ್ಥ.

(2) ಹಾಗೆ ಮರುಸಂಖ್ಯೆ ನೀಡಲಾದ ಖಂಡ (2) ರಲ್ಲಿ "ರೇಡಿಯೋಗ್ರಾಂ" ಎಂಬ ಪದಗಳ ತರುವಾಯ "ದೂರದರ್ಶನ ಸೆಟ್ಟುಗಳು" ಎಂಬ ಪದಗಳನ್ನು ಸೇರಿಸತಕ್ಕದ್ದು.

**4. ಹೊಸ ನಿಯಮ 23ಎ ಸೇರ್ಪಡೆ.**– ಸದರಿ ನಿಯಮಗಳ 23ನೇ ನಿಯಮದ ತರುವಾಯ ಈ ಮುಂದಿನ ನಿಯಮವನ್ನು ಸೇರಿಸತಕ್ಕದ್ದು, ಎಂದರೆ:–

**23ಎ. ಭಾರತದ ಹೊರಗೆ ಇರುವ ಸ್ಥಿರ ಸ್ವತ್ತನ್ನು ಆರ್ಜಿಸುವುದಕ್ಕೆ ಮತ್ತು ವಿಲೇ ಮಾಡುವುದಕ್ಕೆ ಮತ್ತು ವಿದೇಶಿಯರು, ಮುಂತಾದವರೊಂದಿಗೆ ವ್ಯವಹಾರಗಳನ್ನು ನಡೆಸುವುದಕ್ಕೆ ಸಂಬಂಧಿಸಿದಂತೆ ನಿರ್ಬಂಧಗಳು.**– 23ನೇ ನಿಯಮದ (2)ನೇ ಉಪನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಯಾರೇ ಸರ್ಕಾರಿ ನೌಕರನು ನಿಯಮಿಸಿದ ಪ್ರಾಧಿಕಾರದ ಪೂರ್ವ ಮಂಜೂರಾತಿ ಪಡೆದ ಹೊರತು,–

(ಎ) ತನ್ನ ಹೆಸರಿನಲ್ಲಿ ಅಥವಾ ತನ್ನ ಕುಟುಂಬದ ಯಾರೇ ಸದಸ್ಯರ ಹೆಸರಿನಲ್ಲಿ ಭಾರತದ ಹೊರಗೆ ಇರುವ ಯಾವುದೇ ಸ್ಥಿರ ಸ್ವತ್ತನ್ನು ಖರೀದಿಯ, ಅಡಮಾನದ, ಗುತ್ತಿಗೆಯ, ದಾನದ ಮೂಲಕ ಅಥವಾ ಅನ್ಯಥಾ ಆರ್ಜಿಸತಕ್ಕದ್ದಲ್ಲ;

(ಬಿ) ತನ್ನ ಹೆಸರಿನಲ್ಲಿ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನ ಹೆಸರಿನಲ್ಲಿ, ತಾನು ಆರ್ಜಿಸಿದ ಅಥವಾ ಧಾರಣ ಮಾಡಿದ, ಭಾರತದ ಹೊರಗಿರುವ ಯಾವುದೇ ಸ್ಥಿರಸ್ವತ್ತನ್ನು ಮಾರಾಟದ, ಅಡಮಾನದ, ದಾನದ ಮೂಲಕ ಅಥವಾ ಅನ್ಯಥಾ ವಿಲೇ ಮಾಡತಕ್ಕದ್ದಲ್ಲ ಅಥವಾ ಅವುಗಳ ಸಂಬಂಧದಲ್ಲಿ ಯಾವುದೇ ಗುತ್ತಿಗೆಯನ್ನು ನೀಡತಕ್ಕದ್ದಲ್ಲ;

(ಸಿ) (i) ಯಾವುದೇ ಸ್ಥಿರ ಸ್ವತ್ತನ್ನು ತನ್ನ ಹೆಸರಿನಲ್ಲಿ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನ ಹೆಸರಿನಲ್ಲಿ ಖರೀದಿಯ, ಅಡಮಾನದ, ದಾನದ ಮೂಲಕ ಅಥವಾ ಅನ್ಯಥಾ ಆರ್ಜಿಸಲು;

(ii) ತನ್ನ ಸ್ವಂತ ಹೆಸರಿನಲ್ಲಿ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನ ಹೆಸರಿನಲ್ಲಿ ಆರ್ಜಿಸಿದ ಅಥವಾ ಧಾರಣ ಮಾಡಿದ ಯಾವುದೇ ಸ್ಥಿರಸ್ವತ್ತನ್ನು ಮಾರಾಟದ, ಅಡಮಾನದ, ದಾನದ ಮೂಲಕ ಅಥವಾ ಅನ್ಯಥಾ ವಿಲೇ ಮಾಡಲು ಅಥವಾ ಅವುಗಳ ಸಂಬಂಧದಲ್ಲಿ ಯಾವುದೇ ಗುತ್ತಿಗೆಯನ್ನು ನೀಡಲು

– ಯಾರೇ ವಿದೇಶೀಯನೊಂದಿಗೆ, ವಿದೇಶೀ ಸರ್ಕಾರದೊಂದಿಗೆ, ವಿದೇಶೀ ಸಂಘಟನೆಯೊಂದಿಗೆ ಅಥವಾ ಸಂಸ್ಥೆಯೊಂದಿಗೆ ಯಾವುದೇ ವ್ಯವಹಾರವನ್ನು ನಡೆಸತಕ್ಕದ್ದಲ್ಲ.

**ವಿವರಣೆ:–** ಈ ನಿಯಮದಲ್ಲಿ **'ನಿಯಮಿಸಿದ ಪ್ರಾಧಿಕಾರ'** ಎಂಬುದು 23ನೇ ನಿಯಮದಲ್ಲಿರುವಂಥ ಅರ್ಥವನ್ನೇ ಹೊಂದಿರುತ್ತದೆ.

**5. 29ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 29ನೇ ನಿಯಮದಲ್ಲಿ,–

(i) (ಬಿ) ಖಂಡದ ತರುವಾಯ ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:–

"(ಬಿಬಿ) ಸಾರ್ವಜನಿಕ ಸ್ಥಳದಲ್ಲಿ ಯಾವುದೇ ಮಾದಕ ಪೇಯವನ್ನು ಅಥವಾ ಮಾದಕ ವಸ್ತುವನ್ನು ಸೇವಿಸತಕ್ಕದ್ದಲ್ಲ".

(ii) ಕೊನೆಯಲ್ಲಿ ಮುಂದಿನ ವಿವರಣೆಯನ್ನು ಸೇರಿಸತಕ್ಕದ್ದು, ಎಂದರೆ:–

**ವಿವರಣೆ:–** "ಈ ನಿಯಮದ ಉದ್ದೇಶಕ್ಕಾಗಿ **'ಸಾರ್ವಜನಿಕ ಸ್ಥಳ'** ಎಂದರೆ ಹಣ ಪಾವತಿ ಮಾಡಿ ಅಥವಾ ಅನ್ಯಥಾ ಸಾರ್ವಜನಿಕರಿಗೆ ವಾಹನವೂ ಸೇರಿದಂತೆ ಪ್ರವೇಶಾವಕಾಶವಿರುವ ಅಥವಾ ಪ್ರವೇಶವನ್ನು ಅನುಮತಿಸಲಾಗಿರುವ ಯಾವುದೇ ಸಾರ್ವಜನಿಕ ಸ್ಥಳ ಅಥವಾ ಆವರಣಗಳು ಎಂದು ಅರ್ಥ".

ಕರ್ನಾಟಕ ರಾಜ್ಯಪಾಲರು
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಪಿ. ಜೋಶಿ**
ಸರ್ಕಾರದ ಉಪ ಕಾರ್ಯದರ್ಶಿ,
ಸಾಮಾನ್ಯ ಆಡಳಿತ ಇಲಾಖೆ (ಸೇವಾ ನಿಯಮಗಳು).

**ಕರ್ನಾಟಕ ಸರ್ಕಾರ**

**ಮುಖ್ಯ ಸಚಿವಾಲಯ**

**ಸಾಮಾನ್ಯ ಆಡಳಿತ ಇಲಾಖೆ**

**ಅಧಿಕೃತ ಜ್ಞಾಪನ**

ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966 – ಭೂಮಿ, ಸಾಮಗ್ರಿ ಮುಂತಾದವುಗಳ ಖರೀದಿ ಕುರಿತಂತೆ ನಿಯಮಿಸಿದ ಪ್ರಾಧಿಕಾರಕ್ಕೆ ಸಲ್ಲಿಸಬೇಕಾದ ವರದಿಯ ನಮೂನೆ – ನಿಯಮ 23.

**ಉಲ್ಲೇಖ:** ಅಧಿಕೃತ ಜ್ಞಾಪನ ಸಂ. ಜಿಎಡಿ 7 ಎಸ್‌ಆರ್‌ಸಿ 73, ದಿನಾಂಕ 3ನೇ ಅಕ್ಟೋಬರ್ 1973

**ಕಚೇರಿ ಜ್ಞಾಪನ ಸಂಖ್ಯೆ ಜಿಎಡಿ 20 ಎಸ್‌ಆರ್‌ಸಿ 75, ಬೆಂಗಳೂರು,**
**ದಿನಾಂಕ 22ನೇ ಅಕ್ಟೋಬರ್ 1975**

ಮನೆಯನ್ನು ಕಟ್ಟುವುದಕ್ಕಾಗಿ ಅಥವಾ ಅದಕ್ಕೆ ಸೇರ್ಪಡೆ ಮಾಡುವುದಕ್ಕಾಗಿ ನಿಯಮಿಸಲಾದ ಪ್ರಾಧಿಕಾರದಿಂದ ಅನುಮತಿ ಪಡೆಯುವುದಕ್ಕಾಗಿ ಅದಕ್ಕೆ ಸಲ್ಲಿಸಬೇಕಾದ ವರದಿಯ/ ಅರ್ಜಿಯ ನಮೂನೆಯನ್ನು ಮತ್ತು ಮನೆಯ ನಿರ್ಮಾಣ ಪೂರ್ಣಗೊಂಡ ತರುವಾಯ ನಿಯಮಿಸಲಾದ ಪ್ರಾಧಿಕಾರಕ್ಕೆ ಸಲ್ಲಿಸಬೇಕಾದ, ಕಚೇರಿ ಜ್ಞಾಪನ ಸಂಖ್ಯೆ ಜಿಎಡಿ 7 ಎಸ್‌ಆರ್‌ಸಿ 73, ದಿನಾಂಕ 3ನೇ ಅಕ್ಟೋಬರ್ 1973 ರಲ್ಲಿ ನಿಯಮಿಸಿದ ವರದಿಯ ನಮೂನೆಯನ್ನು ಪರಿಶೀಲಿಸಲಾಗಿದೆ. "ಹಣಕಾಸಿನ ಮೂಲ" ವನ್ನು ಪೂರ್ಣ ವಿವರಗಳೊಂದಿಗೆ ಸೂಚಿಸುವ ಸಲುವಾಗಿ ಒಂದು ಅಂಕಣವನ್ನು ಈ ನಮೂನೆಗಳಲ್ಲಿ ಸೇರಿಸಲು ನಿರ್ಧರಿಸಲಾಗಿದೆ. ತದನುಸಾರವಾಗಿ ಮೇಲೆ ತಿಳಿಸಲಾದ ಕಚೇರಿ ಜ್ಞಾಪನದಲ್ಲಿ ನಿಯಮಿಸಲಾದ ಈಗಿರುವ ನಮೂನೆಗಳಿಗೆ ಬದಲಾಗಿ, ಈ ಕಚೇರಿ ಜ್ಞಾಪನಕ್ಕೆ ಲಗತ್ತಿಸಲಾದ ಪರಿಷ್ಕೃತ ನಮೂನೆ I ಹಾಗೂ ನಮೂನೆ IIನ್ನು ಇನ್ನು ಮುಂದೆ ಬಳಸತಕ್ಕದ್ದು.

**ಎನ್. ಪಿ. ಜೋಷಿ**
ಸರ್ಕಾರದ ಉಪ ಕಾರ್ಯದರ್ಶಿ,
ಸಾಮಾನ್ಯ ಆಡಳಿತ ಇಲಾಖೆ (ಸೇವಾ ನಿಯಮಗಳು).

## ನಮೂನೆ I

ಮನೆ ನಿರ್ಮಾಣಕ್ಕಾಗಿ ಅಥವಾ ಅದಕ್ಕೆ ಸೇರ್ಪಡೆ ಮಾಡುವುದಕ್ಕಾಗಿ ನಿಯಮಿಸಿದ ಪ್ರಾಧಿಕಾರಕ್ಕೆ ಅನುಮತಿಗಾಗಿ ಸಲ್ಲಿಸುವ ವರದಿ/ ಅರ್ಜಿಯ ನಮೂನೆ

ಮಾನ್ಯರೇ,

ನಾನು ಮನೆಯನ್ನು ನಿರ್ಮಿಸಲು/ ಅದಕ್ಕೆ ಸೇರ್ಪಡೆ ಮಾಡಲು ಉದ್ದೇಶಿಸಿದ್ದೇನೆಂದು ತಮಗೆ ತಿಳಿಸುತ್ತಿದ್ದೇನೆ. ಮನೆಯ ನಿರ್ಮಾಣಕ್ಕಾಗಿ/ ಮನೆಗೆ ಸೇರ್ಪಡೆ ಮಾಡುವುದಕ್ಕಾಗಿ ನನಗೆ ಅನುಮತಿಯನ್ನು ನೀಡಬೇಕೆಂದು ಕೋರುತ್ತೇನೆ.

----------- ರಲ್ಲಿ ಮನೆಯ ನಿರ್ಮಾಣಕ್ಕೆ/ ಅದಕ್ಕೆ ಸೇರ್ಪಡೆ ಮಾಡುವುದಕ್ಕಾಗಿ/ ವಿಸ್ತರಣೆಗಾಗಿ ಭೂಮಿ ಮತ್ತು ಸಾಮಗ್ರಿಗಳ ಅಂದಾಜು ವೆಚ್ಚವನ್ನು ಈ ಮುಂದೆ ಕೊಡಲಾಗಿದೆ:–

**ಭೂಮಿ**

1. ಸ್ಥಳ (ಸರ್ವೇ ನಂ. ಗ್ರಾಮ, ಜಿಲ್ಲೆ, ರಾಜ್ಯ)
2. ವಿಸ್ತೀರ್ಣ
3. ವೆಚ್ಚ

**ಕಟ್ಟಡ ನಿರ್ಮಾಣ ಸಾಮಗ್ರಿಗಳು ಇತ್ಯಾದಿ**

1. ಇಟ್ಟಿಗೆಗಳು (ದರ/ಪರಿಮಾಣ/ವೆಚ್ಚ)
2. ಸಿಮೆಂಟ್ (ದರ/ಪರಿಮಾಣ/ವೆಚ್ಚ)
3. ಕಬ್ಬಿಣ ಮತ್ತು ಉಕ್ಕು (ದರ/ ಪರಿಮಾಣ/ ವೆಚ್ಚ)
4. ಮರಮುಟ್ಟು (ದರ/ಪರಿಮಾಣ/ವೆಚ್ಚ)
5. ನೈರ್ಮಲ್ಯ ಉಪಕರಣಗಳ ಜೋಡಣೆಗಳು (ವೆಚ್ಚ)
6. ವಿದ್ಯುತ್ ಸಂಪರ್ಕ ಜೋಡಣೆಗಳು (ವೆಚ್ಚ)
7. ಯಾವುದೇ ಇತರ ವಿಶೇಷ ಜೋಡಣೆಗಳು (ವೆಚ್ಚ)
8. ಕಾರ್ಮಿಕ ವೆಚ್ಚಗಳು
9. ಇತರ ವೆಚ್ಚಗಳು, ಯಾವುವಾದರೂ ಇದ್ದರೆ.

**ಭೂಮಿಯ ಮತ್ತು ಕಟ್ಟಡದ ನಿರ್ಮಾಣದ ಒಟ್ಟು ವೆಚ್ಚ**

2. ಕಟ್ಟಡ ನಿರ್ಮಾಣವನ್ನು ಸ್ವತಃ ನಾನೇ ಮೇಲ್ವಿಚಾರಣೆ ಮಾಡುತ್ತೇನೆ/ನಿರ್ಮಾಣ ಕಾರ್ಯವನ್ನು ---------- ರವರು ಮಾಡುತ್ತಾರೆ. ನಾನು ಕಂಟ್ರಾಕ್ಟರ್‌ನೊಂದಿಗೆ ಯಾವುದೇ ಅಧಿಕೃತ ವ್ಯವಹಾರಗಳನ್ನು ಇಟ್ಟುಕೊಂಡಿಲ್ಲ ಅಥವಾ ಇಟ್ಟುಕೊಂಡಿರಲಿಲ್ಲ.

ನಾನು ಕಂಟ್ರಾಕ್ಟರ್‌ನೊಂದಿಗೆ ಅಧಿಕೃತ ವ್ಯವಹಾರವನ್ನು ಇಟ್ಟುಕೊಂಡಿದ್ದೇನೆ/ ಇಟ್ಟುಕೊಂಡಿದ್ದೆ. ಆ ವ್ಯವಹಾರಗಳ ಸ್ವರೂಪ ಈ ಕೆಳಕಂಡಂತಿದೆ.

**ಹಿಂದೆ ಆತನೊಂದಿಗೆ ಇಟ್ಟುಕೊಂಡಿದ್ದ ಅಧಿಕೃತ ವ್ಯವಹಾರಗಳು ಈ ಮುಂದಿನಂತೆ ಇವೆ/ ಇದ್ದವು**

3. ಉದ್ದೇಶಿತ ಕಟ್ಟಡ ನಿರ್ಮಾಣ ವೆಚ್ಚವನ್ನು ಈ ಮುಂದಿನಂತೆ ಭರಿಸಲಾಗುವುದು:–

ಮೊಬಲಗು

i) ಸ್ವಂತ ಉಳಿತಾಯ

ii) ಸಾಲಗಳು/ ಮುಂಗಡಗಳು, ಪೂರ್ಣ ವಿವರಗಳೊಂದಿಗೆ

iii) ಇತರ ಮೂಲಗಳು, ವಿವರಗಳೊಂದಿಗೆ

ತಮ್ಮ ವಿಶ್ವಾಸಿ

( )

---

ಅನ್ವಯವಾಗದ್ದನ್ನು ಹೊಡೆದು ಹಾಕಿ.

ಕಂಟ್ರಾಕ್ಟರನ ಹೆಸರು ಮತ್ತು ವ್ಯವಹಾರದ ಸ್ಥಳವನ್ನು ನಮೂದಿಸಿ.

## ನಮೂನೆ – II

ಮನೆಯ ನಿರ್ಮಾಣ ಕಾರ್ಯ ಪೂರ್ಣಗೊಂಡ ನಂತರ ನಿಯಮಿಸಿದ ಪ್ರಾಧಿಕಾರಿಗೆ ಸಲ್ಲಿಸಬೇಕಾದ ವರದಿಯ ನಮೂನೆ.

ಮಾನ್ಯರೇ,

ನನ್ನ ಪತ್ರ ಸಂಖ್ಯೆ ----------- ದಿನಾಂಕ ----------- ರಲ್ಲಿ, ನಾನು ಮನೆಯನ್ನು ನಿರ್ಮಿಸಲು ಉದ್ದೇಶಿಸಿದ್ದೇನೆಂದು ತಿಳಿಸಿದ್ದೆ/ ಆದೇಶ ಸಂಖ್ಯೆ --------- ದಿನಾಂಕ ------- ರಲ್ಲಿ ಮನೆಯನ್ನು ನಿರ್ಮಿಸುವುದಕ್ಕಾಗಿ ನನಗೆ ಅನುಮತಿಯನ್ನು ನೀಡಲಾಗಿತ್ತು. ಮನೆ ನಿರ್ಮಾಣ ಪೂರ್ಣಗೊಂಡಿದೆ ಮತ್ತು ನಾನು -------------- *ರವರು ಯುಕ್ತವಾಗಿ ಪ್ರಮಾಣೀಕರಿಸಿದ ಮೌಲ್ಯನಿರ್ಧರಣೆ ವರದಿಯನ್ನು ಲಗತ್ತಿಸಿದ್ದೇನೆ.

2. ಲಗತ್ತಿಸಲಾದ ಮೌಲ್ಯನಿರ್ಧರಣಾ ವರದಿಯಲ್ಲಿ ಸೂಚಿಸಲಾದ ನಿರ್ಮಾಣ ವೆಚ್ಚಕ್ಕೆ ಈ ಮುಂದಿನಂತೆ ಹಣಕಾಸು ವ್ಯವಸ್ಥೆ ಮಾಡಲಾಗಿದೆ:–

ಮೊಬಲಗು

i) ಸ್ವಂತ ಉಳಿತಾಯ

ii) ಸಾಲಗಳು/ ಮುಂಗಡಗಳು, ಪೂರ್ಣ ವಿವರಗಳೊಂದಿಗೆ

*(ಸಿವಿಲ್ ಇಂಜಿನಿಯರ್‌ಗಳ ಸಂಸ್ಥೆ ಅಥವಾ ಖ್ಯಾತ ಸಿವಿಲ್ ಇಂಜಿನಿಯರ್).

**ಸೂಚನೆ:–** ಮೇಲೆ ಕೊಟ್ಟಿರುವ ಅಂಕಿಗಳ ಮತ್ತು ನಮೂನೆ 1ರಲ್ಲಿ ಕೊಟ್ಟಿರುವ ಅಂಕಿಗಳ ನಡುವೆ ಯಾವುವೇ ವ್ಯತ್ಯಾಸಗಳಿದ್ದರೆ, ಅವುಗಳ ಬಗ್ಗೆ ಸೂಕ್ತವಾದ ವಿವರಣೆ ನೀಡಬೇಕು.

ದಿನಾಂಕ: ----------- ತಮ್ಮ ವಿಶ್ವಾಸಿ,

( )

## ಮೌಲ್ಯನಿರ್ಧರಣಾ ವರದಿ

ಶ್ರೀ/ ಶ್ರೀಮತಿ/--------------- # ರವರು ನಿರ್ಮಿಸಿರುವ ------------@ ಮನೆಯ ಮೌಲ್ಯವನ್ನು ನಾನು/ ನಾವು ನಿರ್ಧರಣೆ ಮಾಡಿದ್ದೇನೆ/ವೆ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ/ ಪ್ರಮಾಣೀಕರಿಸುತ್ತೇವೆ. ಈ ಮುಂದಿನ ಶೀರ್ಷಿಕೆಗಳಲ್ಲಿ ಮನೆಯ ವೆಚ್ಚವನ್ನು ಅಂದಾಜು ಮಾಡಿ ನಾನು/ ನಾವು ಅದರ ಮೌಲ್ಯನಿರ್ಧರಣೆಯನ್ನು ಕೆಳಗೆ ನೀಡಿದ್ದೇನೆ/ ವೆ.

| <u>ಶೀರ್ಷಿಕೆ</u> | <u>ವೆಚ್ಚ</u><br>ರೂ. ಪೈ |
|---|---|
| 1. ಇಟ್ಟಿಗೆಗಳು | |
| 2. ಸಿಮೆಂಟ್ | |
| 3. ಕಬ್ಬಿಣ ಮತ್ತು ಉಕ್ಕು | |
| 4. ಮರಮುಟ್ಟು | |
| 5. ನೈರ್ಮಲ್ಯ ಉಪಕರಣಗಳ ಜೋಡಣೆಗಳು | |
| 6. ವಿದ್ಯುತ್ ಸಂಪರ್ಕ ಜೋಡಣೆಗಳು | |
| 7. ಇತರ ಎಲ್ಲಾ ವಿಶೇಷ ಜೋಡಣೆಗಳು | |
| 8. ಕಾರ್ಮಿಕ ವೆಚ್ಚಗಳು | |
| 9. ಎಲ್ಲ ಇತರ ವೆಚ್ಚಗಳು | |
| ಕಟ್ಟಡದ ಒಟ್ಟು ವೆಚ್ಚ | |

ದಿನಾಂಕ --------------- (ಮೌಲ್ಯನಿರ್ಧರಣಾ ತಜ್ಞರ ಸಹಿ)

---

@ (ಇಲ್ಲಿ ಮನೆಯ ವಿವರಗಳನ್ನು ನಮೂದಿಸಿ)

# (ಇಲ್ಲಿ ಸರ್ಕಾರಿ ನೌಕರನ ಹೆಸರು ಇತ್ಯಾದಿ ವಿವರಗಳನ್ನು ನಮೂದಿಸಿ)

**ಸಾಮಾನ್ಯ ಆಡಳಿತ ಸಚಿವಾಲಯ**

**ಅಧಿಸೂಚನೆ ಸಂ. ಜಿಎಡಿ 4 ಎಸ್‌ಆರ್‌ಸಿ 75**

**ಬೆಂಗಳೂರು, ದಿನಾಂಕ 28ನೇ ಅಕ್ಟೋಬರ್ 1975**

**ಜಿ.ಎಸ್.ಆರ್. 319.–** ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ಎರಡನೇ ತಿದ್ದುಪಡಿ) ನಿಯಮಗಳು, 1975 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳು ಪ್ರಕಟವಾದ ದಿನಾಂಕದಂದು ಜಾರಿಗೆ ಬರತಕ್ಕದ್ದು.

2. **27ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 27ನೇ ನಿಯಮದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಸರ್ಕಾರಿ ನೌಕರನಿಗೆ ಕೆಳಗಿನ ಅಧಿಕಾರಿಗಳ ಗಮನ ಸೆಳೆಯಲು ಅಥವಾ ಅವರಿಂದ ಪರಿಹಾರ ಪಡೆಯಲು ಬಳಸಿದ ಎಲ್ಲ ಅವಕಾಶಗಳು ಮುಗಿದಾಗ ಅಥವಾ ಮೂರು ತಿಂಗಳ ಅವಧಿಯೊಳಗಾಗಿ ಅವನ ಮನವಿಗೆ ಉತ್ತರ ಬಾರದಿದ್ದರೆ ಅವನು ತನ್ನ ಮನವಿಯ ಒಂದು ಮುಂಗಡ ಪ್ರತಿಯನ್ನು ಸಂಬಂಧಪಟ್ಟ ಸಚಿವರಿಗೆ ಸಲ್ಲಿಸಬಹುದು".

ಕರ್ನಾಟಕ ರಾಜ್ಯಪಾಲರು
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸೈಯ್ಯದ್ ಕರೀಮುಲ್ಲಾ ಖಾದ್ರಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾಮಾನ್ಯ ಆಡಳಿತ ಇಲಾಖೆ (ಸೇವಾ ನಿಯಮಗಳು).

**ಸಾಮಾನ್ಯ ಆಡಳಿತ ಸಚಿವಾಲಯ**

**ಅಧಿಸೂಚನೆ ಜಿಎಡಿ 12 ಎಸ್‌ಆರ್ ಸಿ 75**

**ಬೆಂಗಳೂರು, ದಿನಾಂಕ 1ನೇ ಡಿಸೆಂಬರ್ 1975**

**ಜಿ.ಎಸ್.ಆರ್.355.–** ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ಮೂರನೇ ತಿದ್ದುಪಡಿ) ನಿಯಮಗಳು, 1975 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ* ಪ್ರಕಟವಾದ ದಿನಾಂಕದಂದು ಅವು ಜಾರಿಗೆ ಬರತಕ್ಕದ್ದು.

2. **23ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ ನಿಯಮ 23ರ ವಿವರಣೆಯಲ್ಲಿ:–

(3) ನೇ ಖಂಡದ (ಎ) ಉಪಖಂಡದ (i), (ii), (iii) ಪ್ಯಾರಾಗಳಿಗೆ ಅನುಕ್ರಮವಾಗಿ (ii), (iii), (iv) ಎಂದು ಮರು ಸಂಖ್ಯೆ ನೀಡತಕ್ಕದ್ದು ಹಾಗೂ ಹಾಗೆ ಮರುಸಂಖ್ಯೆ ನೀಡಲಾದ (ii)ನೇ ಪ್ಯಾರಾಕ್ಕೆ ಮುಂಚೆ ಈ ಮುಂದಿನ ಪ್ಯಾರಾವನ್ನು ಸೇರಿಸತಕ್ಕದ್ದು, ಎಂದರೆ:–

(i) "ಕರ್ನಾಟಕ ನ್ಯಾಯಾಂಗ ಸೇವೆಗೆ ಸೇರಿದ ವ್ಯಕ್ತಿಗಳ ಸಂದರ್ಭದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯ".

ಕರ್ನಾಟಕ ರಾಜ್ಯಪಾಲರು
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸೈಯ್ಯದ್ ಕರೀಮುಲ್ಲಾ ಖಾದ್ರಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾಮಾನ್ಯ ಆಡಳಿತ ಇಲಾಖೆ (ಸೇವಾ ನಿಯಮಗಳು).

---

*ಕರ್ನಾಟಕ ರಾಜ್ಯಪತ್ರ ದಿನಾಂಕ 11ನೇ ಡಿಸೆಂಬರ್ 1975, ಭಾಗ IV 2 ಸಿ (i) ರಲ್ಲಿ ಪ್ರಕಟವಾಗಿದೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ ಸಿಆಸುಇ 4 ಎಸ್‌ಆರ್‌ಸಿ 76**

**ಬೆಂಗಳೂರು, ದಿನಾಂಕ 2ನೇ ನವೆಂಬರ್ 1976**

**ಜಿ.ಎಸ್.ಆರ್.383.–** ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 1976 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ* ಪ್ರಕಟವಾದ ದಿನಾಂಕದಂದು ಅವು ಜಾರಿಗೆ ಬರತಕ್ಕದ್ದು.

* ಕರ್ನಾಟಕ ರಾಜ್ಯಪತ್ರ ದಿನಾಂಕ 11ನೇ ಡಿಸೆಂಬರ್ 1975, ಭಾಗ IV 2 ಸಿ **(i)** ರಲ್ಲಿ ಪ್ರಕಟವಾಗಿದೆ.

2. **4ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳು ಎಂದು ಉಲ್ಲೇಖಿಸಲಾಗಿದೆ) 4ನೇ ನಿಯಮದಲ್ಲಿ "**ಖಾಸಗಿ ಉದ್ಯಮದಲ್ಲಿ ಮತ್ತು ಉದ್ಯಮದಲ್ಲಿ**" ಎಂಬ ಪದಗಳು ಬಂದಿರುವ ಕಡೆಗಳಲ್ಲೆಲ್ಲಾ ಅವುಗಳಿಗೆ ಬದಲಾಗಿ "**ಕಂಪನಿಯಲ್ಲಿ ಅಥವಾ ಫರ್ಮ್‌ನಲ್ಲಿ**" ಎಂಬ ಪದಗಳನ್ನು ಸೇರಿಸತಕ್ಕದ್ದು.

3. **14ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 14ನೇ ನಿಯಮದಲ್ಲಿ,–

(1) ಉಪನಿಯಮ (1) ರಲ್ಲಿ "**ಅವನ ಪರವಾಗಿ ಕಾರ್ಯನಿರ್ವಹಿಸುತ್ತಿರುವ ಯಾರೇ ವ್ಯಕ್ತಿಯು**" **ಎಂಬ ಪದಗಳಿಗೆ ಬದಲಾಗಿ** "**ಅವನ ಪರವಾಗಿ ಕಾರ್ಯನಿರ್ವಹಿಸುತ್ತಿರುವ ಇತರ ಯಾರೇ ವ್ಯಕ್ತಿಯು**" ಎಂಬ ಪದಗಳನ್ನು ಸೇರಿಸತಕ್ಕದ್ದು.

(2) ಉಪನಿಯಮ (4) ರಲ್ಲಿ "**ಒಬ್ಬ ಸರ್ಕಾರಿ ನೌಕರನು ---------- ಸ್ವೀಕರಿಸತಕ್ಕದ್ದಲ್ಲ**" ಎಂಬ ಪದಗಳ ತರುವಾಯ "**ಅಥವಾ ಅವನ ಕುಟುಂಬದ ಯಾರೇ ಸದಸ್ಯನು ಅಥವಾ ಅವನ ಪರವಾಗಿ ಕಾರ್ಯನಿರ್ವಹಿಸುವ ಯಾರೇ ಇತರ ವ್ಯಕ್ತಿಯು ಸ್ವೀಕರಿಸಲು ಅನುಮತಿಸತಕ್ಕದ್ದಲ್ಲ**" ಎಂಬ ಪದಗಳನ್ನು ಸೇರಿಸತಕ್ಕದ್ದು.

4. **ಹೊಸ 14ಎ ನಿಯಮದ ಸೇರ್ಪಡೆ.–** ಸದರಿ ನಿಯಮಗಳ 14ನೇ ನಿಯಮದ ತರುವಾಯ ಮುಂದಿನ ನಿಯಮವನ್ನು ಸೇರಿಸತಕ್ಕದ್ದು, ಎಂದರೆ:–

"**14ಎ. ವಧು/ ವರದಕ್ಷಿಣೆ.–** ಯಾರೇ ಸರ್ಕಾರಿ ನೌಕರನು,–

**(i)** ವಧು/ವರದಕ್ಷಿಣೆಯನ್ನು ಕೊಡತಕ್ಕದ್ದಲ್ಲ ಅಥವಾ ತೆಗೆದುಕೊಳ್ಳತಕ್ಕದ್ದಲ್ಲ ಅಥವಾ ಕೊಡಲು ಅಥವಾ ತೆಗೆದುಕೊಳ್ಳಲು ದುಷ್ಪ್ರೇರಿಸತಕ್ಕದ್ದಲ್ಲ; ಅಥವಾ

**(ii)** ವಧುವಿನ ಅಥವಾ ಸಂದರ್ಭಾನುಸಾರ ವರನ ತಂದೆ ತಾಯಿಯರನ್ನು ಅಥವಾ ಪೋಷಕರನ್ನು ವಧು/ ವರದಕ್ಷಿಣೆಯನ್ನು ಕೊಡುವಂತೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಒತ್ತಾಯಪಡಿಸತಕ್ಕದ್ದಲ್ಲ.

**ವಿವರಣೆ.–** ಈ ನಿಯಮದ ಉದ್ದೇಶಗಳಿಗಾಗಿ ವಧು/ವರದಕ್ಷಿಣೆಯು, ವಧು/ವರದಕ್ಷಿಣೆ ನಿಷೇಧ ಅಧಿನಿಯಮ, 1961 (1961ರ ಕೇಂದ್ರ ಅಧಿನಿಯಮ 28) ರಲ್ಲಿ ಕೊಟ್ಟಿರುವ ಅರ್ಥವನ್ನೇ ಹೊಂದಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸೈಯ್ಯದ್ ಕರೀಮುಲ್ಲಾ ಖಾದ್ರಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮಗಳು).

**ಕರ್ನಾಟಕ ಸರ್ಕಾರ**

**ಅಧಿಸೂಚನೆ**

**ಸಂ. ಡಿಪಿಎಆರ್ 21 ಎಸ್‌ಆರ್‌ಸಿ 76, ಬೆಂಗಳೂರು, ದಿನಾಂಕ 15ನೇ ಜನವರಿ 1977**

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 1977 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಂದು ಅವು ಜಾರಿಗೆ ಬರತಕ್ಕದ್ದು

**2. ಹೊಸ ನಿಯಮದ ಸೇರ್ಪಡೆ.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ ನಿಯಮ 28ರ ತರುವಾಯ ಈ ಮುಂದಿನ ನಿಯಮವನ್ನು ಸೇರಿಸತಕ್ಕದ್ದು, ಎಂದರೆ:–

"**28ಎ. ಸರ್ಕಾರಿ ನೌಕರರು ಚಿಕ್ಕ ಕುಟುಂಬವನ್ನು ಹೊಂದಿರುವುದು:–** ಪ್ರತಿಯೊಬ್ಬ ಸರ್ಕಾರಿ ನೌಕರನು ತನ್ನ ಮಕ್ಕಳ ಸಂಖ್ಯೆಯು ಮೂರನ್ನು ಮೀರದಂತೆ ನೋಡಿಕೊಳ್ಳತಕ್ಕದ್ದು:

ಪರಂತು, 1978ರ ಜನವರಿ 31 ರಂದು ಇದ್ದಂತೆ ಮೂರಕ್ಕಿಂತ ಹೆಚ್ಚು ಮಕ್ಕಳನ್ನು ಹೊಂದಿರುವ ಸರ್ಕಾರಿ ನೌಕರನಿಗೆ ಈ ನಿಯಮದಲ್ಲಿರುವುದು ಯಾವುದೂ ಅನ್ವಯವಾಗತಕ್ಕದ್ದಲ್ಲ:

ಮತ್ತೂ ಪರಂತು, ಹಿಂದಿನ ಪರಂತುಕದಲ್ಲಿ ಉಲ್ಲೇಖಿಸಲಾದ ಸರ್ಕಾರಿ ನೌಕರನು ತನ್ನ ಮಕ್ಕಳ ಸಂಖ್ಯೆಯು ಆ ದಿನಾಂಕದಂದು ಇದ್ದ ಸಂಖ್ಯೆಯನ್ನು ಮೀರದಂತೆ ನೋಡಿಕೊಳ್ಳತಕ್ಕದ್ದು."

ಕರ್ನಾಟಕ ರಾಜ್ಯಪಾಲರು
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸೈಯ್ಯದ್ ಕರೀಮುಲ್ಲಾ ಖಾದ್ರಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ ಸಂಖ್ಯೆ ಸಿಆಸುಇ 14 ಎಸ್‌ಆರ್‌ಸಿ 77**

**ಬೆಂಗಳೂರು, ದಿನಾಂಕ 8ನೇ ನವೆಂಬರ್ 1977**

**ಜಿ.ಎಸ್.ಆರ್.340.–** ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ಎರಡನೇ ತಿದ್ದುಪಡಿ) ನಿಯಮಗಳು, 1977 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಂದು* ಅವು ಜಾರಿಗೆ ಬರತಕ್ಕದ್ದು.

**2. 28ಎ ನಿಯಮವನ್ನು ಬಿಟ್ಟುಬಿಡುವುದು.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 28ಎ ನಿಯಮವನ್ನು ಬಿಟ್ಟುಬಿಡತಕ್ಕದ್ದು.

ಕರ್ನಾಟಕ ರಾಜ್ಯಪಾಲರು
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಬಿ. ಬಜಂತ್ರಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವಾ ನಿಯಮಗಳು).

---

* ಕರ್ನಾಟಕ ರಾಜ್ಯಪತ್ರ ದಿನಾಂಕ 24ನೇ ನವೆಂಬರ್ 1977, ಭಾಗ IV 2 ಸಿ (i) ರಲ್ಲಿ ಪ್ರಕಟವಾಗಿದೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ ಸಿಆಸುಇ 2 ಎಸ್‌ಆರ್‌ಸಿ 78**

**ಬೆಂಗಳೂರು, ದಿನಾಂಕ 28ನೇ ಸೆಪ್ಟೆಂಬರ್ 1978**

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 1978 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ* ಪ್ರಕಟವಾದ ದಿನಾಂಕದಂದು ಅವು ಜಾರಿಗೆ ಬರತಕ್ಕದ್ದು.

**2. 21ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 21ನೇ ನಿಯಮದ (4)ನೇ ಉಪನಿಯಮದ (i)ನೇ ಖಂಡದಲ್ಲಿ "**ಯಾರೇ ಸರ್ಕಾರಿ ನೌಕರನು**" ಎಂಬ ಪದಗಳ ತರುವಾಯ "**ಸರ್ಕಾರದ ಪೂರ್ವ ಮಂಜೂರಾತಿಯನ್ನು ಪಡೆದ ಹೊರತು ಮತ್ತು**" ಎಂಬ ಪದಗಳನ್ನು ಸೇರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಬಿ. ಬಜಂತ್ರಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮಗಳು).

---

* ದಿನಾಂಕ 1978ರ 12ನೇ ಅಕ್ಟೋಬರ್ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ ಸಂಖ್ಯೆ ಸಿಆಸುಇ 4 ಎಸ್‌ಆರ್‌ಸಿ 85**

**ಬೆಂಗಳೂರು, ದಿನಾಂಕ 30ನೇ ಡಿಸೆಂಬರ್ 1985**

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದ ಮೂಲಕ ನನಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲನಾದ ಅಶೋಕ್‌ನಾಥ್ ಬ್ಯಾನರ್ಜಿ, ಎಂಬ ನಾನು, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತೇನೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 1985 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಂದು* ಅವು ಜಾರಿಗೆ ಬರತಕ್ಕದ್ದು.

* ಕರ್ನಾಟಕ ರಾಜ್ಯಪತ್ರ ದಿನಾಂಕ 27ನೇ ಮಾರ್ಚ್ 1986, ಭಾಗ IV 2 ಸಿ (i) ರಲ್ಲಿ ಪ್ರಕಟವಾಗಿದೆ.

**2. 14ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳು ಎಂದು ಉಲ್ಲೇಖಿಸಲಾಗಿದೆ) 14ನೇ ನಿಯಮದಲ್ಲಿ:–

"(1). (2)ನೇ ಉಪನಿಯಮದಲ್ಲಿ (i)ನೇ, (ii)ನೇ, (iii)ನೇ ಬಾಬುಗಳಿಗೆ ಬದಲಾಗಿ ಈ ಮುಂದಿನ ಬಾಬುಗಳನ್ನು ಅನುಕ್ರಮವಾಗಿ ಸೇರಿಸತಕ್ಕದ್ದು, ಎಂದರೆ:–

(i) ಯಾವುದೇ 'ಎ' ಅಥವಾ 'ಬಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 1000 ರೂಪಾಯಿಗಿಂತ;

(ii) ಯಾವುದೇ 'ಸಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 500 ರೂಪಾಯಿಗಿಂತ;

(iii) ಯಾವುದೇ 'ಡಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 250 ರೂಪಾಯಿಗಿಂತ.

(2) (3)ನೇ ಉಪನಿಯಮದಲ್ಲಿ (i)ನೇ, (ii)ನೇ ಮತ್ತು (iii)ನೇ ಬಾಬುಗಳಿಗೆ ಬದಲಾಗಿ ಈ ಮುಂದಿನ ಬಾಬುಗಳನ್ನು ಅನುಕ್ರಮವಾಗಿ ಸೇರಿಸತಕ್ಕದ್ದು.

"(i) ಯಾವುದೇ 'ಎ' ಅಥವಾ 'ಬಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 500 ರೂಪಾಯಿಗಿಂತ;

(ii) ಯಾವುದೇ 'ಸಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 200 ರೂಪಾಯಿಗಿಂತ;

(iii) ಯಾವುದೇ 'ಡಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 100 ರೂಪಾಯಿಗಿಂತ."

(3) (4)ನೇ ಉಪನಿಯಮದಲ್ಲಿ (i)ನೇ, ಮತ್ತು (ii)ನೇ ಬಾಬುಗಳಿಗೆ ಬದಲಾಗಿ ಈ ಮುಂದಿನ ಬಾಬುಗಳನ್ನು ಅನುಕ್ರಮವಾಗಿ ಸೇರಿಸತಕ್ಕದ್ದು, ಎಂದರೆ:–

"(i) ಯಾವುದೇ 'ಎ' ಅಥವಾ 'ಬಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 150 ರೂಪಾಯಿಗಿಂತ; ಮತ್ತು

(ii) ಯಾವುದೇ 'ಸಿ' ಅಥವಾ 'ಡಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 50 ರೂಪಾಯಿಗಿಂತ".

3. **23ನೇ ನಿಯಮದ ತಿದ್ದುಪಡಿ.**– ಸದರಿ ನಿಯಮಗಳ 23ನೇ ನಿಯಮದಲ್ಲಿ,–

(i) "**1000 ರೂಪಾಯಿ**" ಎಂಬ ಅಕ್ಷರಗಳು ಹಾಗೂ ಅಂಕಿಗಳು, ಅವು ಬಂದಿರುವ ಕಡೆಗಳಲೆಲ್ಲಾ ಅವುಗಳಿಗೆ ಬದಲಾಗಿ "**ಎರಡು ಸಾವಿರ ರೂಪಾಯಿ**" ಎಂಬ ಪದಗಳನ್ನು ಹಾಗೂ "**500 ರೂಪಾಯಿ**" ಎಂಬ ಅಕ್ಷರ ಹಾಗೂ ಅಂಕಿಗಳು ಬಂದಿರುವ ಎರಡೂ ಕಡೆಗಳಲ್ಲಿ ಅವುಗಳಿಗೆ ಬದಲಾಗಿ "**1000 ರೂಪಾಯಿ**" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) "**ವರ್ಗ I** " **ವರ್ಗ II** " **ವರ್ಗ III**" ಹಾಗೂ " **ವರ್ಗ IV** " ಎಂಬ ಪದಗಳು ಹಾಗೂ ಅಂಕಿಗಳು, ಅವು ಬಂದಿರುವ ಕಡೆಗಳಲ್ಲೆಲ್ಲಾ ಅವುಗಳಿಗೆ ಬದಲಾಗಿ "ಸಮೂಹ ಎ" "ಸಮೂಹ ಬಿ" "ಸಮೂಹ ಸಿ" ಹಾಗೂ " ಸಮೂಹ ಡಿ" ಎಂಬ ಪದಗಳನ್ನು ಅನುಕ್ರಮವಾಗಿ ಸೇರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಸಂಗೋರಾಮ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ ಸಂ. ಸಿಆಸುಇ 11 ಎಸ್‌ಆರ್‌ಸಿ 92**

**ಬೆಂಗಳೂರು, ದಿನಾಂಕ 25/26ನೇ ಮಾರ್ಚ್ 1994**

ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ ಈ ಮುಂದಿನ ನಿಯಮಗಳ ಕರಡನ್ನು ಅದರಿಂದ ಬಾಧಿತರಾಗಬಹುದಾದ ಎಲ್ಲ ವ್ಯಕ್ತಿಗಳಿಂದ ಅದು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 30 ದಿವಸಗಳೊಳಗೆ

ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ 1994ರ ಫೆಬ್ರವರಿ 10ರ ಕರ್ನಾಟಕ ರಾಜ್ಯಪತ್ರದ ವಿಭಾಗ 2ಸಿ (i) ರ ಭಾಗ IV ರಲ್ಲಿ, ಅಧಿಸೂಚನೆ ಸಂಖ್ಯೆ ಡಿಪಿಎಆರ್ 11 ಎಸ್‌ಆರ್‌ಸಿ 92, ದಿನಾಂಕ 11ನೇ ಫೆಬ್ರವರಿ 1994 ರಲ್ಲಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ ಸಂಖ್ಯೆ 1990ರ 14)ರ 3ನೇ ಪ್ರಕರಣದ (2)ನೇ ಉಪ–ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಿರುವುದರಿಂದ;

ಆ ರಾಜ್ಯಪತ್ರವನ್ನು ದಿನಾಂಕ 1994 ಫೆಬ್ರವರಿ 11ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಸದರಿ ಕರಡಿನ ಸಂಬಂಧದಲ್ಲಿ ರಾಜ್ಯ ಸರ್ಕಾರಕ್ಕೆ ಯಾವುದೇ ಆಕ್ಷೇಪಣೆಗಳು ಮತ್ತು ಸಲಹೆಗಳು ಬಂದಿಲ್ಲವಾದ್ದರಿಂದ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪ–ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 1994 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಅವು ಜಾರಿಗೆ ಬರತಕ್ಕದ್ದು.

**2. 23ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 23ನೇ ನಿಯಮದ (1)ನೇ ಉಪ ನಿಯಮದಲ್ಲಿ "**ಪ್ರತಿ ಹನ್ನೆರಡು ತಿಂಗಳ ಅಂತರದಲ್ಲಿ**" ಎಂಬ ಪದಗಳಿಗೆ ಮುಂಚೆ "**ಮಾರ್ಚ್ 31ಕ್ಕೆ ಅಂತ್ಯಗೊಳ್ಳುವ**" ಎಂಬ ಪದಗಳನ್ನು ಹಾಗೂ ಅಂಕಿಗಳನ್ನು ಸೇರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ,**

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವಾ ನಿಯಮಗಳು).

**ನಮೂನೆ – I**

**ಕರ್ನಾಟಕ ಸರ್ಕಾರ**

**20 ––––––––––– ನೇ ಸಾಲಿಗೆ ಸಂಬಂಧಿಸಿದ ಸ್ಥಿರಾಸ್ತಿ ವಿವರಣಪಟ್ಟಿ**

**(31.3.––––––– ರಂದು ಇದ್ದ ಸ್ಥಿತಿ)**

| |
|---|
| 1.ಅಧಿಕಾರಿಯ ಹೆಸರು (ಪೂರ್ಣ ಹೆಸರು ಮತ್ತು ಅಧಿಕಾರಿಯು ಯಾವ ಸೇವೆಗೆ ಸೇರಿದವರಾಗಿದ್ದಾರೆ) |
| 2.ಪ್ರಸ್ತುತ ಧಾರಣ ಮಾಡಿರುವ ಹುದ್ದೆ |
| 3. ಪ್ರಸ್ತುತ ವೇತನ |

| ಆಸ್ತಿಯಿರುವ ಜಿಲ್ಲೆ, ಉಪ ವಿಭಾಗ, ತಾಲ್ಲೂಕು, ಗ್ರಾಮದ ಹೆಸರು | ಭೂಮಿ, ಆಸ್ತಿ/ ಮನೆ ಮತ್ತು ಇತರ ಕಟ್ಟಡದ ಹೆಸರು ಮತ್ತು ವಿವರಗಳು, ಪಾವತಿಸಿರುವ ಬೆಲೆ | ಈಗಿನ ಮೌಲ್ಯ (ಅಂದಾಜು) | ಸರ್ಕಾರಿ ನೌಕರನ ಹೆಸರಿನಲ್ಲಿಲ್ಲದಿದ್ದರೆ ಯಾರ ಹೆಸರಿನಲ್ಲಿದೆ ಮತ್ತು ಸರ್ಕಾರಿ ನೌಕರನೊಂದಿಗೆ ಅವರಿಗಿರುವ ಸಂಬಂಧ ತಿಳಿಸಿ | ಹೇಗೆ ಆರ್ಜಿಸಲಾಯಿತು, ಖರೀದಿಯ ಮೂಲಕವೇ, ಗುತ್ತಿಗೆಯ ಮೂಲಕವೇ, ಅಡಮಾನದ ಮೂಲಕವೇ, ಪಿತ್ರಾರ್ಜಿತವೇ, ದಾನದ ಮೂಲಕವೇ ಅಥವಾ ಬೇರೆ ರೀತಿಯಲ್ಲಿ ಆರ್ಜಿಸಿದ್ದೇ? ಆರ್ಜಿಸಿದ ದಿನಾಂಕ | ಆಸ್ತಿಯಿಂದ ಬಂದ ವಾರ್ಷಿಕ ಆದಾಯ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| | | | | | | |

ಸಹಿ/–

ಹುದ್ದೆ

**ನಮೂನೆ – II**

**20-------- ಕ್ಕೆ ಕೊನೆಗೊಳ್ಳುವ ವರ್ಷಕ್ಕೆ ಸಂಬಂಧಿಸಿದ ಚರಾಸ್ತಿ ವಿವರಣಪಟ್ಟಿ**

**(31-3-20----- ರಂದು ಇದ್ದಂತೆ)**

1.ಹೆಸರು

2.ಪದನಾಮ

3.ವೇತನ ಶ್ರೇಣಿ ಮತ್ತು ಈಗಿನ ವೇತನ

| ಕ್ರಮ ಸಂಖ್ಯೆ | ಬ್ಯಾಂಕುಗಳು/ ಅಂಚೆ ಕಚೇರಿಯಲ್ಲಿ ಹೊಂದಿರುವ ಖಾತೆಗಳು/ ಸ್ಟಾಕುಗಳು/ಷೇರುಗಳು/ ಡಿಬೆಂಚರುಗಳೂ ಸೇರಿದಂತೆ ಚರಾಸ್ತಿಗಳ ವಿವರಗಳು | ಚರಾಸ್ತಿಯ ಮೌಲ್ಯ | ಖರೀದಿ/ ವಿಲೇವಾರಿಯ ದಿನಾಂಕ | ಅಂಕಣ ಸಂ. 2ರಲ್ಲಿ ಹೇಳಿರುವ ಚರಾಸ್ತಿಯನ್ನು ಖರೀದಿಸುವುದಕ್ಕೆ ಇದ್ದ ಆದಾಯದ ಮೂಲಗಳು | ಆಸ್ತಿಯನ್ನು ಆರ್ಜಿಸಿದ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸಿದ ದಿನಾಂಕ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| | | | | | | |

ಸಹಿ/–

ಪದನಾಮ

## ಭಾಗ – I

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:–** ಆಸ್ತಿ ಮತ್ತು ಋಣ ಪಟ್ಟಿಗಳ ನಮೂನೆಯನ್ನು ಬದಲಾಯಿಸುವ ಮತ್ತು ಆರ್ಥಿಕ ವರ್ಷವನ್ನು ಬದಲಾಯಿಸುವ ಬಗ್ಗೆ.

**ಉಲ್ಲೇಖ:–** ಇದೇ ಸಮ ಸಂಖ್ಯೆ ಅಧಿಸೂಚನೆ ದಿನಾಂಕ 25/26ನೇ ಮಾರ್ಚ್ 1994.

### ಅಧಿಕೃತ ಜ್ಞಾಪನ

**ಸಂಖ್ಯೆ ಸಿಆಸುಇ 11 ಸೇನಿಸಿ 92, ಬೆಂಗಳೂರು, ದಿನಾಂಕ 26ನೇ ಏಪ್ರಿಲ್ 1994**

ಉಲ್ಲೇಖಿತ ಅಧಿಸೂಚನೆಯನ್ನು ಹೊರಡಿಸುವ ಮೊದಲು, ಕರ್ನಾಟಕ ನಾಗರಿಕ ಸೇವೆಗಳು (ನಡತೆ) ನಿಯಮಗಳು, 1966 ನಿಯಮ 23ರಲ್ಲಿ ರಾಜ್ಯ ಸರ್ಕಾರದ ಎಲ್ಲಾ ನೌಕರರು ತಮ್ಮ ಆಸ್ತಿ ಮತ್ತು ದಾಯಿತ್ವಗಳ ವಿವರಣೆಯನ್ನು ಪ್ರತಿ ವರ್ಷವೂ ಡಿಸೆಂಬರ್ 31 ಅಂತ್ಯಕ್ಕೆ ನಿಗದಿತ ನಮೂನೆಯಲ್ಲಿ ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸುವಂತೆ ತಿಳಿಸಿದೆ.

2. ಸದರಿ ನಿಯಮ 23ಕ್ಕೆ ಇದೇ ಸಮ ಸಂಖ್ಯೆಯ ದಿನಾಂಕ 26ನೇ ಮಾರ್ಚ್ 1994ರ ಅಧಿಸೂಚನೆಯಲ್ಲಿ, ಡಿಸೆಂಬರ್ 31ರ ಅಂತ್ಯಕ್ಕೆ ಬದಲಾಗಿ ಪ್ರತಿ ವರ್ಷವೂ ಮಾರ್ಚ್ 31ರ ಅಂತ್ಯಕ್ಕೆ ಸಲ್ಲಿಸಲು ತಿದ್ದುಪಡಿ ಮಾಡಲಾಗಿದೆ. ಈ ತಿದ್ದುಪಡಿಯು ದಿನಾಂಕ 28ನೇ ಮಾರ್ಚ್ 1994ರಿಂದ ಜಾರಿಗೆ ಬಂದಿದೆ.

3. ಈ ಹಿಂದೆ ಅಧಿಸೂಚನೆ ಸಂಖ್ಯೆ ಜಿಎಡಿ 20 ಎಸ್ಆರ್‌ಸಿ 75, ದಿನಾಂಕ 14ನೇ ಡಿಸೆಂಬರ್ 1975ರಲ್ಲಿ ನಿಗದಿಪಡಿಸಲಾಗಿದ್ದ ನಮೂನೆಯಲ್ಲಿ ಎಲ್ಲಾ ರಾಜ್ಯ ಸರ್ಕಾರಿ ನೌಕರರು ತಮ್ಮ ಆಸ್ತಿ ಮತ್ತು ದಾಯಿತ್ವಗಳನ್ನು ಸಲ್ಲಿಸಲಾಗುತ್ತಿದ್ದು, ಸದರಿ ನಮೂನೆಯನ್ನು ಸಹ ಮಾರ್ಪಡಿಸಿದೆ. ಇನ್ನು ಮುಂದೆ ಎಲ್ಲಾ ರಾಜ್ಯ ಸರ್ಕಾರಿ ನೌಕರರು ಮಾರ್ಪಡಿಸಲಾದ, ಈ ಅಧಿಕೃತ ಜ್ಞಾಪನಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ತಮ್ಮ ಮತ್ತು ತಮ್ಮ ಕುಟುಂಬದ ಸದಸ್ಯರ ಆಸ್ತಿ ಮತ್ತು ದಾಯಿತ್ವಗಳ ವಿವರಣೆಯನ್ನು ಸಲ್ಲಿಸಬೇಕಾಗಿರುತ್ತದೆ.

4. ಎಲ್ಲಾ ಇಲಾಖಾ ಮುಖ್ಯಸ್ಥರು ಈ ಮೇಲೆ ಹೇಳಿದ ಹಿನ್ನೆಲೆಯಲ್ಲಿ ತಮ್ಮ ಅಧೀನದಲ್ಲಿರುವ ಸಿಬ್ಬಂದಿ ವರ್ಗದವರ ಗಮನಕ್ಕೆ ತರುವಂತೆಯು ಹಾಗೂ ಮಾರ್ಪಡಿಸಿರುವ ನಮೂನೆಯಲ್ಲಿ ವಿವರಗಳನ್ನು ಪಡೆಯುವಂತೆಯೂ ಸೂಚಿಸಿದೆ.

**ರಿನ್‌ಸಾಂಗ**
ಸರ್ಕಾರದ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.

### ಕರ್ನಾಟಕ ಸರ್ಕಾರ

### ಅಧಿಸೂಚನೆ

**ಸಂ. ಡಿಪಿಎಆರ್ 3 ಎಸ್ಆರ್‌ಸಿ 97, ಬೆಂಗಳೂರು, ದಿನಾಂಕ 11–11–1997**

ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಕರ್ನಾಟಕ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14) ರ 3ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ, ಅದು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗೆ ಆಕ್ಷೇಪಣೆಗಳನ್ನು/ ಸಲಹೆಗಳನ್ನು ಆಹ್ವಾನಿಸಿ ಕರ್ನಾಟಕ ರಾಜ್ಯಪತ್ರದ ಭಾಗ IV ರ ಪ್ರಕರಣದ 2(ಸಿ) (i) ನಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್ಆರ್‌ಸಿ 97, ದಿನಾಂಕ 21–7–1997ರಂದು ಪ್ರಕಟಿಸಿರುವುದರಿಂದ;

ಮತ್ತು ಆ ರಾಜ್ಯಪತ್ರವನ್ನು 25–9–1997ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡಿನ ಸಂಬಂಧದಲ್ಲಿ ರಾಜ್ಯಸರ್ಕಾರಕ್ಕೆ ಯಾವುದೇ ಸಲಹೆಗಳು ಮತ್ತು ಆಕ್ಷೇಪಣೆಗಳು ಬಂದಿಲ್ಲವಾದರಿಂದ.

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (-------ತಿದ್ದುಪಡಿ) ನಿಯಮಗಳು, 1997 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ* ಅವು ಜಾರಿಗೆ ಬರತಕ್ಕದ್ದು.

* ಕರ್ನಾಟಕ ವಿಶೇಷ ರಾಜ್ಯಪತ್ರ ದಿನಾಂಕ 19ನೇ ನವೆಂಬರ್ 1997ರಲ್ಲಿ ಪ್ರಕಟವಾಗಿದೆ.

2. **ಹೊಸ 29ಎ ನಿಯಮದ ಸೇರ್ಪಡೆ.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ ನಿಯಮ 29ರ ತರುವಾಯ ಈ ಮುಂದಿನ ನಿಯಮವನ್ನು ಸೇರಿಸತಕ್ಕದ್ದು ಎಂದರೆ:–

"**29ಎ. ಮಕ್ಕಳ ನಿಯೋಜನೆ.–** ಯಾರೇ ಸರ್ಕಾರಿ ನೌಕರನು ಗೃಹ ಕೃತ್ಯದಲ್ಲಿ ಸಹಾಯ ಮಾಡುವುದಕ್ಕಾಗಿ ಹದಿನಾಲ್ಕು ವರ್ಷಕ್ಕಿಂತ ಕಡಿಮೆ ವಯಸ್ಸಿನ ಯಾವುದೇ ಮಗುವನ್ನು ಕೆಲಸಕ್ಕೆ ಇಟ್ಟುಕೊಳ್ಳತಕ್ಕದ್ದಲ್ಲ;

(2) ಯಾರೇ ಸರ್ಕಾರಿ ನೌಕರನು (1)ನೇ ಉಪನಿಯಮವನ್ನು ಉಲ್ಲಂಘನೆ ಮಾಡುವುದು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957 ರ 8ನೇ ನಿಯಮದ (v) ರಿಂದ (viii)ರ ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ದಂಡನೆಗೆ ಒಳಪಡುವ ದುರ್ನಡತೆ ಎನಿಸಿಕೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವಾ ನಿಯಮಗಳು).

**ಕರ್ನಾಟಕ ಸರ್ಕಾರ**

**ಅಧಿಸೂಚನೆ**

**ಸಂ. ಡಿಪಿಎಆರ್ 14 ಎಸ್‌ಆರ್‌ಸಿ 97, ಬೆಂಗಳೂರು, ದಿನಾಂಕ 17–6–1998**

ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಕರ್ನಾಟಕ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಅದು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗೆ ಆಕ್ಷೇಪಣೆಗಳನ್ನು/ ಸಲಹೆಗಳನ್ನು ಆಹ್ವಾನಿಸಿ ಕರ್ನಾಟಕ ರಾಜ್ಯಪತ್ರದ ಭಾಗ IVರ ವಿಭಾಗ 2(ಸಿ) (i), ದಿನಾಂಕ 4–4–1998ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್‌ಆರ್‌ಸಿ 97, ದಿನಾಂಕ 1–4–1998ರಲ್ಲಿ ಪ್ರಕಟಿಸಿರುವುದರಿಂದ;

ಮತ್ತು ಸದರಿ ರಾಜ್ಯಪತ್ರವನ್ನು 4–4–1998ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ.

ಮತ್ತು ಸದರಿ ಕರಡಿನ ಸಂಬಂಧದಲ್ಲಿ ರಾಜ್ಯಸರ್ಕಾರಕ್ಕೆ ಯಾವುದೇ ಸಲಹೆಗಳು ಮತ್ತು ಆಕ್ಷೇಪಣೆಗಳು ಬಂದಿಲ್ಲವಾದ್ದರಿಂದ.

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14) ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 1998 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಂದು ಅವು ಜಾರಿಗೆ ಬರತಕ್ಕದ್ದು.

2. **ಹೊಸ 29ಬಿ ನಿಯಮದ ಸೇರ್ಪಡೆ.–**ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 29ಎ ನಿಯಮದ ತರುವಾಯ ಈ ಮುಂದಿನ ನಿಯಮವನ್ನು ಸೇರಿಸತಕ್ಕದ್ದು ಎಂದರೆ:–

"**29ಬಿ. ಲೈಂಗಿಕ ಕಿರುಕುಳದ ನಿಷೇಧ.–** ಯಾರೇ ಸರ್ಕಾರಿ ನೌಕರನು ಕೆಲಸದ ಸ್ಥಳಗಳಲ್ಲಿ ಯಾರೇ ಮಹಿಳಾ ಸರ್ಕಾರಿ ನೌಕರಳನ್ನು ಲೈಂಗಿಕ ಕಿರುಕುಳಕ್ಕೆ ಒಳಪಡಿಸತಕ್ಕದ್ದಲ್ಲ.

[**ವಿವರಣೆ.–** ಈ ನಿಯಮದ ಉದ್ದೇಶಕ್ಕಾಗಿ "**ಲೈಂಗಿಕ ಕಿರುಕುಳ**" ಎಂಬುದು (ನೇರವಾದ ಅಥವಾ ಸೂಚ್ಯವಾದ) ಇಷ್ಟವಾಗದ ಲೈಂಗಿಕ ಉದ್ದೇಶವುಳ್ಳ ನಡತೆಯನ್ನು, ಎಂದರೆ:–

(ಎ) ಮೈ ಮುಟ್ಟುವುದು ಮತ್ತು ಒಲಿಸಿಕೊಳ್ಳಲು ಪ್ರಯತ್ನಿಸುವುದನ್ನು;

(ಬಿ) ಲೈಂಗಿಕ ಅನುಗ್ರಹಕ್ಕಾಗಿ ಒತ್ತಾಯ ಮಾಡುವುದನ್ನು ಅಥವಾ ಬೇಡಿಕೊಳ್ಳುವುದನ್ನು;

(ಸಿ) ಲೈಂಗಿಕ ವರ್ಣನೆಯ ಮಾತುಗಳನ್ನಾಡುವುದನ್ನು;

(ಡಿ) ಅಶ್ಲೀಲ ಸಾಹಿತ್ಯ, ಚಿತ್ರಗಳನ್ನು ತೋರಿಸುವುದನ್ನು;ಅಥವಾ

(ಇ) ಯಾವುದೇ ಇತರ ಇಷ್ಟವಾಗದ ಲೈಂಗಿಕ ಸ್ವರೂಪದ ದೈಹಿಕ, ಮೌಖಿಕ ಅಥವಾ ಆಂಗಿಕ ವರ್ತನೆಯನ್ನು

– ಒಳಗೊಳ್ಳುತ್ತದೆ".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂ: ಡಿಪಿಎಆರ್ 6 ಎಸ್‌ಆರ್‌ಸಿ 2002, ದಿನಾಂಕ ಫೆಬ್ರವರಿ 5, 2004**

ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು, ಈ ಮುಂದಿನ ನಿಯಮಗಳ ಕರಡನ್ನು, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಅದು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿನಗಳೊಳಗೆ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ ಕರ್ನಾಟಕ ವಿಶೇಷ ರಾಜ್ಯಪತ್ರದ ಸಂಚಿಕೆ ಭಾಗ–IVಎ ದಿನಾಂಕ 26.12.2003 ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 6 ಎಸ್‌ಆರ್‌ಸಿ 2002, ದಿನಾಂಕ 23.12.2003 ರಲ್ಲಿ ಪ್ರಕಟಿಸಿರುವುದರಿಂದ;

ಮತ್ತು ಸದರಿ ರಾಜ್ಯಪತ್ರವನ್ನು 26.12.2003 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರಕ್ಕೆ ಯಾವುದೇ ಆಕ್ಷೇಪಣೆಗಳು ಮತ್ತು ಸಲಹೆಗಳು ಬಂದಿಲ್ಲವಾದ್ದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ ಪ್ರಕರಣ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 2003 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದು ಅವು ಜಾರಿಗೆ ಬರತಕ್ಕದ್ದು.

**2. 29ಸಿ ನಿಯಮದ ಸೇರ್ಪಡೆ.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ 29ಬಿ ನಿಯಮದ ತರುವಾಯ, ಈ ಮುಂದಿನ ನಿಯಮವನ್ನು ಸೇರಿಸತಕ್ಕದ್ದು, ಎಂದರೆ:–

"**29ಜ. ಗಂಡ/ ಹೆಂಡತಿ ಮತ್ತು ಮಕ್ಕಳ ಪಾಲನೆ.–** ಯಾರೇ ಸರ್ಕಾರಿ ನೌಕರನು/ ಳು ಅವನ ಹೆಂಡತಿಯ ಅಥವಾ ಅವಳ ಗಂಡನ ಮತ್ತು ಮಕ್ಕಳ ಆಹಾರ, ಬಟ್ಟೆ, ವಸತಿ ಮತ್ತು ಶಿಕ್ಷಣ ಮುಂತಾದವುಗಳಂಥ ಮೂಲ ಅವಶ್ಯಕತೆಗಳ ಬಗ್ಗೆ ಕಾಳಜಿ ವಹಿಸಲು ನಿರ್ಲಕ್ಷಿಸತಕ್ಕದ್ದಲ್ಲ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂ. ಡಿಪಿಎಆರ್ 6 ಎಸ್‌ಆರ್‌ಸಿ 2004, ದಿನಾಂಕ ನವೆಂಬರ್ 16, 2006**

ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು, ಈ ಮುಂದಿನ ನಿಯಮಗಳ ಕರಡನ್ನು, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಅದು ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳೊಳಗೆ ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ ಕರ್ನಾಟಕ ರಾಜ್ಯಪತ್ರದ ಭಾಗ –IVಎ (ಪಿ.ಆರ್. ಸಂ. 1205) ದಿನಾಂಕ 22.9.2006 ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 6 ಎಸ್‌ಆರ್‌ಸಿ 2004, ದಿನಾಂಕ 22.9.2006 ರಲ್ಲಿ ಪ್ರಕಟಿಸಿರುವುದರಿಂದ;

ಮತ್ತು ರಾಜ್ಯಪತ್ರವು 22.9.2006 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡಿನ ಸಂಬಂಧದಲ್ಲಿ ರಾಜ್ಯಸರ್ಕಾರಕ್ಕೆ ಯಾವುದೇ ಆಕ್ಷೇಪಣೆಗಳು ಮತ್ತು ಸಲಹೆಗಳು ಬಂದಿಲ್ಲವಾದ್ದರಿಂದ;

ಈಗ ಕರ್ನಾಟಕ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ ಪ್ರಕರಣ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 2006 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಅವು ಜಾರಿಗೆ ಬರತಕ್ಕದ್ದು.

2. **14ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966 (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ)ರ 14ನೇ ನಿಯಮದಲ್ಲಿ,–

(1) (2)ನೇ ಉಪನಿಯಮದಲ್ಲಿ, (i)ನೇ, (ii)ನೇ ಮತ್ತು (iii)ನೇ ಖಂಡಗಳಿಗೆ ಬದಲಾಗಿ ಈ ಮುಂದಿನ ಖಂಡಗಳನ್ನು ಸೇರಿಸತಕ್ಕದ್ದು, ಎಂದರೆ:–

"(i) ಯಾವುದೇ 'ಎ' ಅಥವಾ 'ಬಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 5000 ರೂಪಾಯಿಗಿಂತ ಹೆಚ್ಚಾಗಿದ್ದರೆ;

(ii) ಯಾವುದೇ 'ಸಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 2500 ರೂಪಾಯಿಗಿಂತ ಹೆಚ್ಚಾಗಿದ್ದರೆ;

(iii) ಯಾವುದೇ 'ಡಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 1250 ರೂಪಾಯಿಗಿಂತ ಹೆಚ್ಚಾಗಿದ್ದರೆ".

(2) (3)ನೇ ಉಪನಿಯಮದಲ್ಲಿ, (i)ನೇ, (ii)ನೇ ಮತ್ತು (iii)ನೇ ಖಂಡಗಳಿಗೆ ಬದಲಾಗಿ ಈ ಮುಂದಿನ ಖಂಡಗಳನ್ನು ಸೇರಿಸತಕ್ಕದ್ದು, ಎಂದರೆ:–

"(i) ಯಾವುದೇ 'ಎ' ಸಮೂಹ ಅಥವಾ 'ಬಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 2500 ರೂಪಾಯಿಗಿಂತ ಹೆಚ್ಚಾಗಿದ್ದರೆ;

(ii) ಯಾವುದೇ 'ಸಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 1000 ರೂಪಾಯಿಗಿಂತ ಹೆಚ್ಚಾಗಿದ್ದರೆ; ಮತ್ತು

(iii) ಯಾವುದೇ 'ಡಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 500 ರೂಪಾಯಿಗಿಂತ ಹೆಚ್ಚಾಗಿದ್ದರೆ; ಮತ್ತು

(3) (4)ನೇ ಉಪನಿಯಮದಲ್ಲಿ, (i)ನೇ ಮತ್ತು (ii)ನೇ ಖಂಡಗಳಿಗೆ ಬದಲಾಗಿ ಈ ಮುಂದಿನ ಖಂಡಗಳನ್ನು ಸೇರಿಸತಕ್ಕದ್ದು, ಎಂದರೆ:–

(i) ಯಾವುದೇ 'ಎ' ಸಮೂಹದ ಅಥವಾ 'ಬಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 750 ರೂಪಾಯಿಗಿಂತ ಹೆಚ್ಚಾಗಿದ್ದರೆ; ಮತ್ತು

(ii) ಯಾವುದೇ 'ಸಿ' ಸಮೂಹದ ಅಥವಾ 'ಡಿ' ಸಮೂಹದ ಹುದ್ದೆಯನ್ನು ಹೊಂದಿರುವ ಸರ್ಕಾರಿ ನೌಕರನ ಸಂದರ್ಭದಲ್ಲಿ 250 ರೂಪಾಯಿಗಿಂತ ಹೆಚ್ಚಾಗಿದ್ದರೆ."

3. **23ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 23ನೇ ನಿಯಮದಲ್ಲಿ,–

(ಎ) (2)ನೇ ಉಪನಿಯಮದ ತರುವಾಯ, ಈಗಿರುವ ಪರಂತುಕದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತೂ ಪರಂತು, ಈ ಉಪನಿಯಮದಲ್ಲಿರುವುದು ಯಾವುದೂ, ಸರ್ಕಾರಿ ನೌಕರನ ಕುಟುಂಬದ ಸದಸ್ಯನು ಸರ್ಕಾರಿ ನೌಕರನದೇ/ಳದೇ ನಿಧಿಗಳಿಂದ ಬೇರೆಯದೇ ಆದ ಆತನ/ ಆಕೆಯ ಸ್ವಂತ ನಿಧಿಗಳಿಂದ (ದಾನಗಳು, ಪಿತ್ರಾರ್ಜಿತವಾಗಿ ಬಂದಿದ್ದು, ಮೊದಲಾದವುಗಳೂ ಸೇರಿದಂತೆ) ಆತನ ಅಥವಾ ಆಕೆಯ ಸ್ವಂತ ಹೆಸರಿನಲ್ಲಿ ಮತ್ತು ಆತನ ಅಥವಾ ಆಕೆಯ ಸ್ವಂತ ಹಕ್ಕಿನಿಂದ ಮಾಡಿಕೊಂಡ ವ್ಯವಹಾರಗಳಿಗೆ ಅನ್ವಯಿಸತಕ್ಕದ್ದಲ್ಲ."

(ಬಿ) (3)ನೇ ಮತ್ತು (3ಎ)ನೇ ಉಪನಿಯಮಗಳಲ್ಲಿ, "ಎರಡು ಸಾವಿರ ರೂಪಾಯಿಗಳನ್ನು" ಎಂಬ ಪದಗಳಿಗೆ ಬದಲಾಗಿ "ಹತ್ತು ಸಾವಿರ ರೂಪಾಯಿಗಳನ್ನು" ಎಂಬ ಪದಗಳನ್ನು ಮತ್ತು "ಒಂದು ಸಾವಿರ ರೂಪಾಯಿಗಳನ್ನು" ಎಂಬ ಪದಗಳಿಗೆ ಬದಲಾಗಿ "ಐದು ಸಾವಿರ ರೂಪಾಯಿಗಳನ್ನು" ಎಂಬ ಪದಗಳನ್ನು ಸೇರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಮಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು– 2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಅಧಿಸೂಚನೆ

**ಸಂ. ಡಿಪಿಎಆರ್ 48 ಎಸ್‌ಆರ್‌ಸಿ 2007, ಬೆಂಗಳೂರು, ದಿನಾಂಕ ಸೆಪ್ಟೆಂಬರ್ 25, 2008**

ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ಅದು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳೊಳಗೆ ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ – IVಎ (ಪಿ.ಆರ್. ಸಂ. 947)

ದಿನಾಂಕ 30.08.2008 ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 48 ಎಸ್‌ಆರ್‌ಸಿ 2007, ದಿನಾಂಕ 29.08.2008 ರಲ್ಲಿ ಪ್ರಕಟಿಸಿರುವುದರಿಂದ;

ಮತ್ತು ಸದರಿ ರಾಜ್ಯಪತ್ರವನ್ನು 30.8.2008 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡಿನ ಸಂಬಂಧದಲ್ಲಿ ರಾಜ್ಯ ಸರ್ಕಾರಕ್ಕೆ ಯಾವುದೇ ಆಕ್ಷೇಪಣೆಗಳು/ ಸಲಹೆಗಳು ಬಂದಿಲ್ಲವಾದ್ದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 2008 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಅವು ಜಾರಿಗೆ ಬರತಕ್ಕದ್ದು.

2. **23ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು 1966ರ 23ನೇ ನಿಯಮದ (3)ನೇ ಉಪನಿಯಮದ ತರುವಾಯ, ಪರಂತುಕದ ತರುವಾಯ ಈ ಮುಂದಿನ ಹೆಚ್ಚಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತೂ ಪರಂತು, ಈ ಉಪನಿಯಮದಲ್ಲಿರುವುದು ಯಾವುದೂ ಸರ್ಕಾರಿ ನೌಕರನ ಕುಟುಂಬದ ಸದಸ್ಯನು ಸರ್ಕಾರಿ ನೌಕರನದೇ/ಆದೇ ನಿಧಿಗಳಿಂದ ಬೇರೆಯದೇ ಆದ ಆತನ/ ಆಕೆಯ ಸ್ವಂತ ನಿಧಿಗಳಿಂದ (ದಾನಗಳು, ಪಿತ್ರಾರ್ಜಿತವಾಗಿ ಬಂದದ್ದು, ಮೊದಲಾದವುಗಳೂ ಸೇರಿದಂತೆ) ಆತನ ಅಥವಾ ಆಕೆಯ ಸ್ವಂತ ಹೆಸರಿನಲ್ಲಿ ಮತ್ತು ಆತನ ಅಥವಾ ಆಕೆಯ ಸ್ವಂತ ಹಕ್ಕಿನಿಂದ ಮಾಡಿಕೊಂಡ ವ್ಯವಹಾರಗಳಿಗೆ ಅನ್ವಯಿಸತಕ್ಕದ್ದಲ್ಲ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಮಾರ್ಕಂಡೇಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,

(ಸೇವಾ ನಿಯಮಗಳು–2).

The above translation of the Karnataka Civil Services (Conduct) Rules, 1966 shall be authoritative text in the Kannada language under section 5A of the Karnataka Official Language Act, 1963

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 158

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

**ಅಧಿಸೂಚನೆ**

**ಸಂಖ್ಯೆ:ಆರ್‌ಡಿ 138 ಎಲ್‌ಜಿಎ 2008, ಬೆಂಗಳೂರು, ದಿನಾಂಕ: 10/15ನೇ ಫೆಬ್ರವರಿ, 2010**

ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಉಡುಪಿ ಜಿಲ್ಲೆಯ **"ಕಾರ್ಕಳ ತಾಲ್ಲೂಕು"** ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಹೊಸದಾಗಿ ರಚಿಸಲಾಗಿದೆ.

| ಕ್ರ.ಸಂ | ತಾಲ್ಲೂಕು | ಸದಸ್ಯರು | |
|---|---|---|---|
| 1 | ಕಾರ್ಕಳ | 1). ಶ್ರೀ ಗೋಪಾಲ ಭಂಡಾರಿ, ಮಾನ್ಯ ಶಾಸಕರು, ಕಾರ್ಕಳ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| | | 2) ಶ್ರೀ ಸದಾಶಿವ ಶೆಟ್ಟಿ ಬಿನ್ ಶಂಕರ ಶೆಟ್ಟಿ, ಪೊಸರ್ಮ ಬೋಳ, ಕಾರ್ಕಳ | ಸದಸ್ಯರು (ಸಾಮಾನ್ಯ) |
| | | 3) ಶ್ರೀ ಪದ್ಮನಾಭ ನಾಯ್ಕ್, ಕಡಾರಿ, ಕಾರ್ಕಳ | ಸದಸ್ಯರು (ಪ.ಪಂಗಡ) |
| | | 4) ಶ್ರೀಮತಿ ಶೈಲಜಾ ಉಪಾಧ್ಯಾಯ, ಕಾಳಿಕಾಂಬ, ಕಾರ್ಕಳ | ಸದಸ್ಯರು (ಮಹಿಳೆ) |
| | | 5) ತಹಶೀಲ್ದಾರ್, ಕಾರ್ಕಳ ತಾಲ್ಲೂಕು, ಕಾರ್ಕಳ | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 166

**ಎಲ್. ಕೃಷ್ಣಪ್ಪ**

ಪೀಠಾಧಿಕಾರಿ

ಕಂದಾಯ ಇಲಾಖೆ (ಭೂ ಮಂ–2)

**ಅಧಿಸೂಚನೆ**

**ಸಂಖ್ಯೆ: ಕಂಇ 47 ಮನೋಮು 2009, ಬೆಂಗಳೂರು, ದಿನಾಂಕ: 15ನೇ ಫೆಬ್ರವರಿ, 2010**

'ಧರಿತ್ರಿ' (ಅರುಣ ಚೇತನ) ಸ್ವಯಂ ಸೇವಾ ಸಂಸ್ಥೆಯು ಅಂಗವಿಕಲ /ಬುದ್ಧಿಮಾಂದ್ಯರ ನೆರವಿಗಾಗಿ ಸಂಸ್ಥೆಯನ್ನು ನಡೆಸುತ್ತಿದ್ದು, ಸದರಿ ಸಂಸ್ಥೆಗೆ ಶ್ರೀ ಹೆಚ್.ಸಿ. ಅಯ್ಯಂಗಾರ್‌ರವರು ದಾನವಾಗಿ ನೀಡುತ್ತಿರುವ ಮನೆಯ ದಾನ ಪತ್ರದ ನೋಂದಣಿಗೆ ತಗಲುವ ಮುದ್ರಾಂಕ ಶುಲ್ಕದ ಪಾವತಿಯಿಂದ ಕರ್ನಾಟಕ ಮುದ್ರಾಂಕ ಕಾಯ್ದೆ 1957ರ ಕಲಂ 9(1) (ಎ) ರನ್ವಯ ಶೇ. 50 ರಷ್ಟು ಮಾತ್ರ ರಿಯಾಯಿತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 167

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಒಇ 356 ಪಿಎಂಎಸ್ 2009, ಬೆಂಗಳೂರು, ದಿನಾಂಕ:4ನೇ ಮಾರ್ಚ್, 2010**

1872ರ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ ಕಾಯಿದೆಯ ಕಲಂ 7ರ (ಕೇಂದ್ರ ಕಾಯ್ದೆ ಎಕ್ಸ್ ವಿ–1872)ಅನ್ವಯ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಡೇನಿಯಲ್ ದೇವರಾಜ್, ಹಳೆಯಂಗಡಿ ಗ್ರಾಮ ಪಂಚಾಯತ್ ಮುಂಭಾಗ, ಹಳೆಯಂಗಡಿ–574146, ಮಂಗಳೂರು ಇವರನ್ನು ಮೇಲಿನ ಕಾಯ್ದೆಯಡಿ ಕಾರ್ಯ ನಿರ್ವಹಿಸಲು ಕ್ರಿಶ್ಚಿಯನ್ ಜನಾಂಗದ ವಿವಾಹ ನೊಂದಣಾಧಿಕಾರಿಯನ್ನಾಗಿ ದಕ್ಷಿಣ ಕನ್ನಡ ಜಿಲ್ಲೆಯ ಆಡಳಿತ ವ್ಯಾಪ್ತಿಗೆ ಮಾತ್ರ ಸೀಮಿತಗೊಳಿಸಿ ಸದರಿ ಕಾಯ್ದೆಯಡಿಯಲ್ಲಿ ಸೂಚಿಸಿರುವ ಷರತ್ತುಗಳನ್ನು ಪೂರೈಸುವ ಷರತ್ತಿಗೊಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 168

**ಆಲಿಸ್ ಗೊನ್ಸಾಲ್ವಿಸ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ರಹದಾರಿ ಮತ್ತು ವಿದೇಶಿಯರು)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಕಸಂವಾಪ್ರ 116 ಕೆಎಂಯು 2009, ಬೆಂಗಳೂರು, ದಿನಾಂಕ: 6ನೇ ಜನವರಿ, 2010,**

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕಿನ ಬೆಳಗಲಿ ಗ್ರಾಮದಲ್ಲಿರುವ ಶ್ರೀ ಈಶ್ವರಲಿಂಗ ದೇವಸ್ಥಾನವನ್ನು ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ, 1961ರ ಕಲಂ 4(1)ರ (ಕರ್ನಾಟಕ ಆಕ್ಟ್ ಆಫ್ 1962) ಅಡಿಯಲ್ಲಿ ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯಪಟ್ಟಿದೆ. ಈ ಉದ್ದೇಶದಿಂದ ಸದರಿ ಶ್ರೀ ಈಶ್ವರಲಿಂಗ ದೇವಸ್ಥಾನವನ್ನು ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು 60 ದಿನಗಳ ಅವಧಿಯೊಳಗೆ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. ಈ ಸಂಬಂಧ ಆಕ್ಷೇಪಣೆಗಳನ್ನು ಸರ್ಕಾರದ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ (ಆಡಳಿತ ಕನ್ನಡ) ವಿಕಾಸ ಸೌಧ, ಬೆಂಗಳೂರು–560 001 ಇವರಿಗೆ ಸಲ್ಲಿಸಬಹುದು.

ಈ ಸ್ಮಾರಕವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸುವ ಬಗ್ಗೆ ಯಾವುದೇ ರೀತಿಯ ಆಕ್ಷೇಪಣೆಗಳು ಬಾಧಿತರಿಂದ ಮೇಲ್ಕಾಣಿಸಿದ ಅವಧಿಯೊಳಗೆ ರಾಜ್ಯ ಸರ್ಕಾರವು ಸ್ವೀಕರಿಸಿದಲ್ಲಿ ಅದನ್ನು ಪರಿಶೀಲಿಸಲಾಗುವುದು ನಿಗದಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗದಿದ್ದಲ್ಲಿ ಸದರಿ ಶ್ರೀ ಈಶ್ವರಲಿಂಗ ದೇವಸ್ಥಾನವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸಲು ಮುಂದಿನ ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಪರಿವಿಡಿ**

| ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡ ಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ | ಮೇರೆಗಳು | ಒಡೆತನ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| ಬಾಗಲ ಕೋಟೆ | ಮುಧೋಳ್ | ಬೆಳಗಲಿ ಗ್ರಾಮ | ಶ್ರೀ ಈಶ್ವರಲಿಂಗ ದೇವಾಲಯ | ಬೆಳಗಲಿ ಗ್ರಾಮ ಪಂಚಾಯತಿ ಆಸ್ತಿ:1396 | ದೇವಾಲಯದ ಜಾಗದ ವಿಸ್ತೀರ್ಣ ಹೀಗಿದೆ. ಉತ್ತರಕ್ಕೆ– 57.57 ಮೀ ದಕ್ಷಿಣಕ್ಕೆ– 56.89 ಮೀ ಪೂರ್ವಕ್ಕೆ: 54.40 ಮೀ ಪಶ್ಚಿಮಕ್ಕೆ: 54.90 ಮೀ ಒಟ್ಟು 223.76 ಮೀ | ಪೂರ್ವಕ್ಕೆ: ರಸ್ತೆ ಪಶ್ಚಿಮಕ್ಕೆ:ವಿಠಲ ದೇವರ ಗುಡಿ ಉತ್ತರಕ್ಕೆ:ರಸ್ತೆ ದಕ್ಷಿಣಕ್ಕೆ: ಸಂತೂಬಾಯಿ ಗುಡಿ | ಶ್ರೀ ಈಶ್ವರದೇವರ ಗುಡಿ (ಸಾರ್ವಜನಿಕ) | ಕಲ್ಯಾಣ ಚಾಲುಕ್ಯರ ಕಾಲದ ಪುರಾತನ ದೇವಸ್ಥಾನವಾಗಿದೆ. (ಕ್ರಿ.ಶ. 12ನೇ ಶತಮಾನ) ಅಮೃತೇಶ್ವರ ದೇವಸ್ಥಾನ ಕಮಿಟಿಯು ದೇವಸ್ಥಾನವನ್ನು ನಿರ್ವಹಿಸುತ್ತಿದೆ. |

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 169

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 3 ಇಸಂಗ್ರ 2009 (1), ಬೆಂಗಳೂರು, ದಿನಾಂಕ:4ನೇ ಫೆಬ್ರವರಿ, 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎರ ಉಪಕಲಂ (2)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 15ನೇ ಫೆಬ್ರವರಿ 2010ರ ದಿನಾಂಕವನ್ನು ಈ ಮೂಲಕ ಅಧಿಸೂಚಿಸಿದ್ದು, ಆ ದಿನಾಂಕದಿಂದ ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು ಇದರ ಎಲ್ಲಾ ಸಂಗ್ರಹಣೆಗಳನ್ನು ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಎಸ್. ಪ್ರಸನ್ನ ಕುಮಾರ್**

ಪೀಠಾಧಿಕಾರಿ–1, (ಇ–ಆಡಳಿತ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 3 EPR 2009(2), Bangalore, Date: 4th February, 2010**.

In exercise of the powers conferred by Sub-Section(2) of Section18A of the Karnataka Transparency in Public Procurements Act, 1999, (Karnataka Act 29 of 2000) the Government of Karnataka hereby notifies the 15th February, 2010 to be the day from which the Social Welfare Department, Bengaluru shall procure all its procurements through e-Procurement platform.

By Order and in the name of the Governor of Karnataka

P.R.170

**G.S. PRASANNA KUMAR**

Desk Officer-1, (e-Governance)

Dept. of Personnel & Administrative Reforms

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 3 ಇಸಂಗ್ರ 2009 (3), ಬೆಂಗಳೂರು, ದಿನಾಂಕ:4ನೇ ಫೆಬ್ರವರಿ, 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎರ ಉಪಕಲಂ (2)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 15ನೇ ಫೆಬ್ರವರಿ 2010 ದಿನಾಂಕವನ್ನು ಈ ಮೂಲಕ ಅಧಿಸೂಚಿಸಿದ್ದು, ಆ ದಿನಾಂಕದಿಂದ ವಾರ್ತಾ ಇಲಾಖೆ, ಬೆಂಗಳೂರು ಇದರ ಎಲ್ಲಾ ಸಂಗ್ರಹಣೆಗಳನ್ನು ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಎಸ್. ಪ್ರಸನ್ನ ಕುಮಾರ್**

ಪೀಠಾಧಿಕಾರಿ–1, (ಇ–ಆಡಳಿತ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 3 EPR 2009(4), Bangalore, Date: 4th February, 2010.**

In exercise of the powers conferred by Sub-Section(2) of Section18A of the Karnataka Transparency in Public Procurements Act, 1999, (Karnataka Act 29 of 2000) the Government of Karnataka hereby notifies the 15th February, 2010 to be the day from which the Information Department, Bengaluru shall procure all its procurements through e-Procurement platform.

By Order and in the name of the Governor of Karnataka

P.R.171

**G.S. PRASANNA KUMAR**

Desk Officer-1, (e-Governance)

Dept. of Personnel & Administrative Reforms

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 2 ಎಸ್‌ಎಂಆರ್ 2010, ಬೆಂಗಳೂರು, ದಿನಾಂಕ:19ನೇ ಫೆಬ್ರವರಿ, 2010,**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ರ ನಿಯಮ 3 ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯುಲ್–I ರ ಐಟಂ 243 ರ ನಂತರ ಈ ಕೆಳಕಂಡ ಐಟಂಗಳನ್ನು ಸೇರ್ಪಡೆಗೊಳಿಸಿದೆ.

(244) ಶ್ರೀ ದೇವಿ ನರ್ಸಿಂಗ್ ಹೋಂ, ಕುಂದಾಪುರ –576 201, ಉಡುಪಿ ಜಿಲ್ಲೆ

(245) ಮಾತೃಶ್ರೀ ಆಸ್ಪತ್ರೆ, ಬೆಂಗಳೂರು ರಸ್ತೆ, ಚಿಂತಾಮಣಿ–563125 ಚಿಕ್ಕಬಳ್ಳಾಪುರ ಜಿಲ್ಲೆ

(246) ನಯನ ಆಸ್ಪತ್ರೆ ತರೀಕೆರೆ ರಸ್ತೆ, ಭದ್ರಾವತಿ–577301, ಶಿವಮೊಗ್ಗ ಜಿಲ್ಲೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಮಾರ್ಕಂಡೇಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–2)

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 2 SMR 2010, Bangalore, Date: 19th February, 2010.**

In exercise of the powers conferred by clause (ff) of rule 3 of the Karnataka Government Servants' (Medical Attendance) Rules 1963, the Government of Karnataka hereby adds the following items after item 243 of Schedule I to the said rules, namely:

(244) Sri Devi Nursing Home, Kundapura-576 201, Udupi District

(245) Mathrushree Hospital, Bangalore Road, Chintamani-563 125, Chikkaballapura District

(246) Nayana Hospital, Tarikere Road, Bhadravathi-577 301, Shimoga District.

By Order and in the name of the Governor of Karnataka

**P. MARKANDEYA**

P.R.172

Under Secretary to Government

Dept. of Personnel & Administrative Reforms

(Service Rules-2)